ಜಯತು ಭಗವಾನ್

ಬಾಲಸರಸ್ವತೀ ಗ್ರಂಥಮಾಲಾ

---

# ಚಿತ್ರಗುಪ್ತನ ೧ನೆಯ ದಪ್ತರ

## ೨

# ಗುರುತುಕಂಡ ಕಳ್ಳ



ವಿದ್ವಾನ್

ವಿದ್ಯಾಭೂಷಣ ಬಾಲಸರಸ್ವತೀ ನರಹರಿಶರ್ಮರಿಂದ

ವಿರಚಿತವಾದುದು

---

ಬೆಂಗಳೂರು

ದಿ. ಸ್ಟೀಮ್ ಲಾರ್ಜ್ ಕಂಪೆನಿ, ಪವರ್ ಪ್ರೆಸ್ಸಿನಲ್ಲಿ

ಮುದ್ರಿಸಲ್ಪಟ್ಟಿತು.

Price 5 As.] 1931 [ಬೆಲೆ ೫ ಆಣೆ.

ಜಯತು ಭಗವಾ೯

ಬಾಲಸರಸ್ವತೀ ಗ್ರಂಥಮಾಲಾ

---

# ಚಿತ್ರಗುಪ್ತನ ೧ನೆಯ ದಪ್ತರ

# ೨

# ಗುರುತುಕಂಡ ಕಳ್ಳ



ವಿದ್ವಾ೯

ವಿದ್ಯಾಭೂಷಣ ಬಾಲಸರಸ್ವತೀ ನರಹರಿಶರ್ಮರಿಂದ

ವಿರಚಿತವಾದುದು

---

ಬೆಂಗಳೂರು

ವಿ. ಸೈಡ್ ಅಂಡ್ ಕಂಪೆನಿ, ಪವರ್ ಪ್ರೆಸ್ಸಿನಲ್ಲಿ

ಮುದ್ರಿಸಲ್ಪಟ್ಟಿತು.

Price 5 As.] 1931 [ಬೆಲೆ ೫ ಆಣೆ.

Publisher,

**G. Siddappa, Photographer,**

BANGALORE CITY.

---

ಸೋಲ್ ಏಜಂಟರು,

**ಕೆ. ಎ. ಚೌರಪ್ಪ ಅಂಡ್ ಸನ್ಸ್,**

**ಪುಸ್ತಕ ವ್ಯಾಪಾರಿಗಳು,**

ಅವೆನ್ಯೂ ರೋಡ್, ಬೆಂಗಳೂರು ಸಿಟಿ.



ಶ್ರೀಯುತ ವಿದ್ವಾನ್ ವಿದ್ಯಾಭೂಷಣ
ಬಾಲಸರಸ್ವತೀ.

# ವಿ ಜ್ಞಾ ಪ ನೆ

ಈ 'ಗುರುತುಕಂಡ ಕಳ್ಳ' ಎಂಬುದು ಚಿತ್ರಗುಪ್ತನ ಮೊದಲನೆಯ ದಪ್ತರದಲ್ಲಿ ಎರಡನೆಯ ಗ್ರಂಥವಾಗಿರುವುದು. ಗುರುತುಕಂಡ ಕಳ್ಳನ ವಿಷಯದಲ್ಲಿ ನಾವು ನಮ್ಮ ಪ್ರಿಯಪಾಠಕ ಮಹಾಶಯರಿಗೆ ವಿಶೇಷವಾಗಿ ತಿಳಿಸಬೇಕಾದುದೇನೂ ಇರುವುದಿಲ್ಲ. ಚಿಕ್ಕದಾದ ಈ ಪತ್ತೇದಾರಿಯ ಕಥೆಯನ್ನು ಆದರದಿಂದ ಓದುವುದಾದರೆ, ಗುರುತುಕಂಡ ಕಳ್ಳನ ಯೋಗ್ಯತೆಯು ಕೊಂಚ ಮಟ್ಟಿಗೆ ತಿಳಿದಂತಾಗುವುದು. ಆ ಮೇಲೆಯಾದರೂ ಗುರುತುಕಂಡ ಕಳ್ಳರಿಗೆ ಆಶ್ರಯವನ್ನು ಕೊಡಕೂಡದೆಂಬುದೇ ನಮ್ಮ ಅಭಿಪ್ರಾಯವು.

ಲೋಕದಲ್ಲಿ ಕಳ್ಳ, ದಾರಿಗಳ್ಳ, ದರೋಡೆಗಳ್ಳ, ಗುರುತುಕಂಡ ಕಳ್ಳ, ಮೈಗಳ್ಳರೆಂದು ಕಳ್ಳರು ತೆರತೆರನಾಗಿ ನಾಮರೂಪಗಳನ್ನು ಧರಿಸಿಕೊಂಡು ಸಾಧು ಸಜ್ಜನರಿಗೆ ಅಡಿಗಡಿಗೂ ಕಿರುಕುಳವನ್ನುಂಟುಮಾಡುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿರುವುದು. ಈ ಕಳ್ಳರಲ್ಲಿ ಗುರುತುಕಂಡ ಕಳ್ಳನೆಂಬುವನು ಮಾನವಜಾತಿಗೆ ಪ್ರಬಲವಾದ ಶತ್ರುವಾಗಿ ಏರ್ಪಟ್ಟಿರುವನು. ಈತನನ್ನು ಹುಡುಕಿಕೊಂಡು ನಾವು ದೂರ ಹೋಗಬೇಕಾದುದೇನೂ ಇರುವುದಿಲ್ಲ. ಈತನು ಆವಾಗಲೂ ನಮ್ಮೊಡನೆಯೇ ಇರುತ್ತಿರುವನು. ಈತನನ್ನು ಕಂಡುಹಿಡಿಯುವುದು ಮಟ್ಟಿಗೆ ಅತಿ ಪ್ರಯಾಸದ ಕೆಲಸವಾಗಿರುವುದು. ನಾವು ಈತನ ವಿಷಯದಲ್ಲಿ ಉದಾಸೀನರಾಗಿರುವುದಾದರೆ, ಈ ಗುರುತುಕಂಡ ಕಳ್ಳನು ಜಿಗಣೆಯಂತೆ ನಮ್ಮ ರಕ್ತವನ್ನೇ ಹೀರಿಬಿಡುವನು. ಬಳಿಕ ನಮ್ಮ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ. ಆದುದರಿಂದ ಪ್ರತಿಯೊಬ್ಬ ಮಾನವನೂ ಪತ್ತೇದಾರನಂತಾಗಿ ಊಹಾಪೋಹ ಜ್ಞಾನವುಳ್ಳವನಾಗಿಯೂ, ಯುಕ್ತಾಯುಕ್ತ ವಿವೇಚನಾಪರನಾಗಿಯೂ, ದೂರ ದೃಷ್ಟಿಯುಳ್ಳವನಾಗಿದ್ದರೂ ಸೂಕ್ಷ್ಮದೃಷ್ಟಿಯುಳ್ಳವನಾಗಿಯೂ, ಕಾರ್ಯಕಾರಣವನ್ನು ಚೆನ್ನಾಗಿ ಅರಿತವನಾಗಿಯೂ, ಬಗೆ ಬಗೆಯ ಲೋಕಾನುಭವಗಳನ್ನು ಪಡೆದುಕೊಂಡವನಾಗಿಯೂ ಇದ್ದುಕೊಂಡು ಗುರುತುಕಂಡ ಕಳ್ಳರನ್ನು ಜಾಣ್ಮೆಯಿಂದ ಅರಿತುಕೊಳ್ಳತಕ್ಕುದಿದೆ. ಈ ವಿಷಯದಲ್ಲಿ ಈ ಕ್ಷುದ್ರಗ್ರಂಥವು ದಿಙ್ಮಾತ್ರದಿಂದ ಉಪಕಾರಕವಾಗಬಹುದೆಂದು ನಿರೀಕ್ಷಿಸಿ ಪ್ರಿಯ ಪಾಠಕ ಮಹಾಶಯರ ಅವಗಾಹನೆಗಾಗಿ ಸಮರ್ಪಿಸಲ್ಪಟ್ಟಿರುವುದು. ಇದರಿಂದ ಶತಾಂಶದಲ್ಲಿ ಒಂದಂಶದಷ್ಟಾದರೂ ಪ್ರಯೋಜನವು ಕಂಡು ಬರುವುದಾದರೆ, ನಮ್ಮ ಶ್ರಮಕ್ಕೆ ತಕ್ಕ ಪ್ರತಿಫಲವೇ ದೊರೆತಂತಾಯಿತೆಂದು ನಾವು ದೃಢವಾಗಿಯೂ ನಂಬತಕ್ಕವರಾಗಿರುವೆವು.

24, ಸೆಪ್ಟಂಬರ್ 1931,
ಮೈಸೂರು.

" ಇತಿ ದೇಶಭಾಷಾಭಿಮಾನಿ ವಶಂವದ,
" ಬಾಲಸರಸ್ವತಿ "

ಜಯತು ಭಗವಾ೯

**ಬಾಲಸರಸ್ವತೀ ಗ್ರಂಥಮಾಲಾ**

---

# ಚಿತ್ರಗುಪ್ತನ ೧ನೆಯ ದಸ್ತರ

# ೨

# ಗುರು ತು ಕಂ ಡ ಕ ಳ್ಳ

## ಮೊದಲನೆಯ ಭಾಗ

### ೧

ನಾನು ಹುಡುಗನಾಗಿದ್ದಾಗ, ನನಗೊಬ್ಬ ಸ್ನೇಹಿತನಿದ್ದನು. ಪಾಠಶಾಲೆಯಲ್ಲಿ ನಾವಿಬ್ಬರೂ ಒಂದೇ ತರಗತಿಯಲ್ಲಿ ಓದುತ್ತಿದ್ದೆವು, ಒಟ್ಟಿಗೆ ಕೂಡುತ್ತಿದ್ದೆವು; ಒಟ್ಟಿಗೆ ಆಡುತ್ತಿದ್ದೆವು; ಒಟ್ಟಿಗೆ ಓಡುತ್ತಿದ್ದೆವು? ಒಟ್ಟಿಗೆ ಮನೆಗೆ ಬರುತ್ತಿದ್ದೆವು.

ನನ್ನ ಸ್ನೇಹಿತನ ಹೆಸರು ಸೋಮಸುಂದರ. ಆತನು ಬಲು ಬುದ್ಧಿಮಂತನಾದುದರಿಂದ, ತರಗತಿಯಲ್ಲಿ ಗುರುವಿಗೆ ಮುಖ್ಯ ಶಿಷ್ಯನಾದನು. ಎಲ್ಲಾ ಪರೀಕ್ಷೆಗಳಲ್ಲಿಯೂ ಆತನನ್ನು ಮೀರಿಸಿದವರೇ ಇರಲಿಲ್ಲ. ಪಾಠಶಾಲೆಯು ಆವ ಬಗೆಯ ಬಹುಮಾನವಾದರೂ ಆತನ ಕೈಬಿಟ್ಟು ಹೋಗುತ್ತಿರಲಿಲ್ಲ. ನಾನು ತಾನೇ ಏತಕ್ಕೆ ಸಂಕೋಚಪಡಬೇಕು? ಆವಾಗಲೂ ನಾನು ಆತನ ಜತೆಯಲ್ಲಿರುತ್ತಿದ್ದರೂ, ಆತನ ಯೋಗ್ಯತೆಯು ನನಗಿರಲಿಲ್ಲ. ನಾನು ಆತನೊಡನೆ ಸೇರಿಕೊಂಡು ಪ್ರವೇಶ ಪರೀಕ್ಷೆಯಲ್ಲಿ ತೇರ್ಗಡೆಯನ್ನು ಹೊದ್ದಿದೆನು. ನನ್ನ ವಿದ್ಯಾಭ್ಯಾಸವಾದರೋ ಅಷ್ಟಕ್ಕೇ ಕೊನೆಗಂಡಿತು. ಆತನು ಮೇಲಿಂದ ಮೇಲೆ ದೊಡ್ಡ

---

**ವಿದ್ವಾ೯ ವಿದ್ಯಾಭೂಷಣ ಬಾಲಸರಸ್ವತಿಯವರಿಂದ ವಿರಚಿತವಾದುದು.**

ದೊಡ್ಡ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ಬಗೆ ಬಗೆಯ ಬಿರುದಾವಳಿಯನ್ನು ಪಡೆದುಕೊಂಡನು.

ವಿದ್ಯಾಸಂಬಂಧವು ತಪ್ಪಿಹೋದುದರಿಂದ, ನಾನೂ ಆತನೂ ಅಡಿಗಡಿಗೆ ಸೇರುವುದೇ ತಪ್ಪಿಹೋಯಿತು. ಕ್ರಮಕ್ರಮವಾಗಿ ಆತನ ಯೋಗಕ್ಷೇಮ ಕೂಡ ತಿಳಿಯುವುದೇ ಒಂದು ವಿಧದಲ್ಲಿ ಅತಿ ಪ್ರಯಾಸಕ್ಕಿಟ್ಟಿತು. ಕಾರಣವೇನೆಂದರೆ :— ಆತನು ಆಚಾರ್ಯ ಪರೀಕ್ಷೆಯಲ್ಲಿ ಉತ್ತೀರ್ಣನಾದ ಕೂಡಲೆ, ಇಚ್ಛಾಪುರದಲ್ಲಿದ್ದ ತನ್ನ ಸೋದರ ಮಾಮನಾದ ಧನ ಕುಬೇರನೆನಿಸಿದ ರಮಾರಮಣನೆಂಬುವನಲ್ಲಿಗೆ ಹೋಗಿ ಸೇರಿಕೊಂಡನು.

ನಾನು ಗ್ರಾಮರಕ್ಷಣದ ಇಲಾಖೆಗೆ ಸೇರಿಕೊಂಡು, ಈ ಗ್ರಂಥವನ್ನು ಬರೆವ ವೇಳೆಯಲ್ಲಿ ಒಬ್ಬ ಗಣ್ಯನಾದ ಗ್ರಾಮರಕ್ಷಾಧಿಕಾರಿಯಾಗಿದ್ದೆನು.

ಈ ರೀತಿಯಲ್ಲಿ ಕೆಲವು ಕಾಲ ಕಳೆಯಲು, ಒಂದಾನೊಂದು ದಿನ ನನ್ನ ಬಾಲ್ಯ ಮಿತ್ರನಾದ ಸೋಮಸುಂದರನಿಂದ ಹಠಾತ್ತಾಗಿ ಒಂದು ಪತ್ರವು ನನ್ನ ಕೈಸೇರಿತು. ಅದು ಈ ರೀತಿಯಾಗಿದ್ದಿತು.

ಪತ್ರ

ಮಿತ್ರವರ್ಯ ಶ್ರೀಯುತ ಲಲಿತಮೋಹನ ಮಹಾಶಯ

ಸಮೀಪೇಷು.

ನಾನು ಆಚಾರ್ಯ ಪರೀಕ್ಷೆಯನ್ನು ಕೊಟ್ಟು, ಇಚ್ಛಾಪುರದಲ್ಲಿರುತ್ತಿದ್ದ ನನ್ನ ಸೋದರಮಾಮನ ಬಳಿಗೆ ಹೋದೆನು. ಅಲ್ಲಿ ಆತನು ನನ್ನನ್ನು ಗಣ್ಯವಾಗಿಯೂ, ವಿಶ್ವಾಸಾರ್ಹವಾಗಿಯೂ ಇರುವ ಅದೊಂದು ಕೆಲಸದಲ್ಲಿ ನಿಯಮಿಸಿದನು. ಆದರೆ ಭಯಂಕರವಾದ ದುರ್ಘಟನೆಯೊಂದು ಒದಗಿಬಂದು, ನನಗೆ ಸರ್ವನಾಶವುಂಟಾಗುವುದಕ್ಕೆ ಉಪಕ್ರಮವಾಗಿರುವುದು.

ಪ್ರಕೃತದಲ್ಲಿ ಸಂಭವಿಸಿರುವ ದುರ್ಘಟನಾವಳಿಯೆಲ್ಲವನ್ನೂ ವಿವರಿಸಲು ಪ್ರಯೋಜನವಿಲ್ಲ. ಈ ವಿಷಯ ವಿವೇಚನೆಯು ಪ್ರತ್ಯಕ್ಷದಲ್ಲಿ ನಡೆಯುವುದೇ ಮೇಲು. ನಾನು ಒಂಬತ್ತು ವಾರಗಳ ವರೆಗೆ ಮಸ್ತಿಷ್ಕ ಜ್ವರದಿಂದ ಯಾತನೆ ಪಟ್ಟು, ಈಗೀಗ ಆರೋಗ್ಯಲಾಭವನ್ನು ಪಡೆದುಕೊಳ್ಳುತ್ತಿರುವೆನು. ಹೀಗಿದ್ದರೂ ನಾನು ಬಲು ದುರ್ಬಲನಾಗಿ ಹೋಗಿರುವೆನು. ಜಸವಡೆದ ಪತ್ತೇದಾರನಾದ ಜಯಶಂಕರ ಮಹಾಶಯನನ್ನು ನನ್ನಲ್ಲಿಗೆ ಕರೆತರಲು ನಿನ್ನಿಂದ ಸಾಧ್ಯವೇ ?

ಇಲ್ಲಿಯ ಅಧಿಕಾರಿಗಳು, ಏನೂ ಪ್ರಯೋಜನವಿಲ್ಲವೆಂದು ಕೈಬಿಟ್ಟಿರುವರಾದ ಕಾರಣ, ನಾನು ಈ ಘಟನೆಯಲ್ಲಿ ಆತನ ಅಭಿಪ್ರಾಯವನ್ನು ತೆಗೆದುಕೊಳ್ಳ ಬೇಕೆಂದಿರುವೆನು. ಕೂಡಿದಷ್ಟು ಬೇಗನೆ ಆತನನ್ನು ಇಲ್ಲಿಗೆ ಕರೆದುಕೊಂಡು ಬರಬೇಕೆಂದು ನನ್ನ ಪ್ರಾರ್ಥನೆ. ನಾನು ಎಲ್ಲಿಯ ವರೆಗೂ ಈ ದುರಂತವಾದ ಸಂದೇಹಾಸ್ಪದವಾದ ಅವಸ್ಥೆಯಲ್ಲಿರುವೆನೋ, ಅಲ್ಲಿಯ ವರೆಗೂ ನನಗೆ ಒಂದು ನಿಮಿಷ ಕೂಡ ಒಂದು ಯುಗವಾಗಿ ತೋರಿಕೊಳ್ಳುತ್ತಿರುವುದು. ನಾನು ಇದಕ್ಕೆ ಮೊದಲೇ ಆತನನ್ನು ಕರೆಯಿಸಿಕೊಂಡು, ಆತನ ಪರಾಮರ್ಶವನ್ನು ತೆಗೆದು ಕೊಳ್ಳದಿರಲು, ನನಗೆ ಸಂಭವಿಸಿದ್ದ ಬುದ್ಧಿಯ ಭ್ರಮಣೆಯು ಕಾರಣವೇ ಹೊರತು, ಜಯಶಂಕರನು ಅಸಮರ್ಥನೆಂದಾಗಲಿ, ಮತ್ತೊಂದಾಗಲಿ ಎಂದಿಗೂ ಕಾರಣವಲ್ಲವೆಂದು ಆತನಿಗೆ ತಿಳಿಸಬೇಕು. ಈಗ ನನಗೆ ಪೂರ್ವಾವಸ್ಥೆಯುಂ ಟಾಗಿರುವುದು ; ಆದರೆ ಮಾತ್ರ ಮತ್ತೆ ಎಲ್ಲಿ ಬುದ್ಧಿವಿಕಾರ ಜ್ವರವು ಬಂದು ಬಿಡುವುದೋ ಎಂಬ ಭಯದಿಂದ ನಾನು ಆ ದುರ್ಘಟನೆಯನ್ನು ಕುರಿತು ಬಲು ಹೊತ್ತು ಚಿಂತಿಸುತ್ತಿರಲಾರೆ. ದಯೆಯಿಟ್ಟು ಹೇಗಾದರೂ ಮಾಡಿ ಆತನನ್ನು ನನ್ನಲ್ಲಿಗೆ ಕರೆತರಬೇಕು.

" ಇತಿ, ಒಂದಾನೊಂದು ಕಾಲದ ನಿನ್ನ ಸಹಾಧ್ಯಾಯಿ,

" ಸೋಮಸುಂದರ. "

---

೨

ಸೋಮಸುಂದರನ ಕಾಗದವನ್ನು ನೋಡಿದ ಕೂಡಲೆ ನನಗೆ ನಿಜವಾಗಿಯೂ ವ್ಯಸನವುಂಟಾಯಿತು. ನಿಜವಾಗಿಯೂ ಆತನಿಗೆ ದುರಂತವಾದ ವಿಪತ್ತು ಸಂಭ ವಿಸಿರಬೇಕು. ಹಾಗಿಲ್ಲದಿದ್ದರೆ, ಆತನೆಂದಿಗೂ ಹೀಗೆ ಕಾಗದ ಬರೆಯಲಾರನೆಂದು ನನಗೆ ತೋರಿಬಂದಿತು. ಜಯಶಂಕರನಿಗೆ ಈ ಸಂಗತಿಯನ್ನು ತಿಳಿಸಿದರೆ, ಆತನೆಂದಿಗೂ ಉದಾಸೀನತೆಯನ್ನು ತೋರಲಾರನು. ನಾನು ಎಷ್ಟೋ ಸಂಗತಿ ಗಳನ್ನು ಆತನಿಗೆ ತಿಳಿಸಿರುವೆನು. ಆತನು ಆವಾಗಲೂ ನನ್ನ ವಿಷಯದಲ್ಲಿ ಉಪೇಕ್ಷೆಯನ್ನು ಮಾಡಿದವನಲ್ಲ. ಈಗಲೂ ಮಾಡಲಾರನೆಂದು ನನಗೆ ನಂಬುಗೆ ಯುಂಟು. 'ಗುಣಾಢ್ಯರಾದ ಸ್ನೇಹಿತರ ಸ್ವಭಾವವೇ ಹೀಗಿರುವುದು' ಎಂದು ಕೊಂಡು ನನ್ನ ಹೆಂಡಿತಿಯನ್ನು ಕರೆದು, ಈ ಕಾಗದದ ಭಾವಾರ್ಥವನ್ನು ಆಕೆಗೆ ತಿಳಿಸಿದೆನು. ಆಕೆಯು ನನ್ನ ಸ್ನೇಹಿತನ ವಿಷಯದಲ್ಲಿ ವ್ಯಸನಪಟ್ಟು, 'ಹೇಗಾ ದರೂ ಮಾಡಿ ಜಯಶಂಕರನನ್ನು ಕರೆದುಕೊಂಡು ಹೋಗಿ, ಬಂದಿರುವ ಕಷ್ಟವನ್ನು

ಹೋಗಲಾಡಿಸಲು ಯತ್ನಮಾಡಬೇಕಾದುದು ಮಿತ್ರನ ಲಕ್ಷಣವು' ಎಂದು ಹೇಳಿದಳು.

ಹೆಂಡಿತಿಯು ಹೇಳಿದ ಮಾತನ್ನು ಕೇಳಿದ ಕೂಡಲೆ, ನಾನು ಜಯಶಂಕರನ ಮನೆಯ ಕಡೆಗೆ ತೆರಳಿದೆನು. ಜಯಶಂಕರನು ಮಹಡಿಯ ಮೇಲೆ ಒಂದು ಗೋಪ್ಯವಾದ ಕೋಣೆಯಲ್ಲಿ ಕುಳಿತುಕೊಂಡು ರಸಾಯನಶಾಸ್ತ್ರಕ್ಕೆ ಅನುಸಾರವಾಗಿ ಕೆಲವು ವಸ್ತುಗಳ ಪರಸ್ಪರ ಸಂಯೋಗದಿಂದುಂಟಾಗಬಹುದಾದ ದ್ರವ್ಯಗುಣ ವನ್ನು ಪರೀಕ್ಷಿಸಿ ನೋಡುತ್ತಿದ್ದನು. ಆ ಕೋಣೆಯಲ್ಲಿ ಮತ್ತಾರೂ ಪ್ರವೇಶಿಸ ಕೂಡದಾಗಿ ವಿಧಾಯಕವಾಗಿದ್ದಿತು. ನನಗೂ ಜಯಶಂಕರನಿಗೂ ಇದ್ದ ವಿಶೇಷ ಪರಿಚಯವನ್ನು ನೋಡಿ, ಮನೆಯ ಸೇವಕನು ನನಗೆ ಎಲ್ಲಿಗೆ ಹೋಗುವುದಕ್ಕೂ ಅಡ್ಡಿ ಮಾಡಲಿಲ್ಲ. ಯಜಮಾನನು ಮನೆಯಲ್ಲಿರುವುದನ್ನು ತಿಳಿದ ಕೂಡಲೆ, ನಾನು ಆತನಿದ್ದ ಕೋಣೆಯೊಳಗೆ ನಿಶ್ಶಬ್ದವಾಗಿ ಪ್ರವೇಶಮಾಡಿ, ಆತನ ಹಿಂದೆ ಹೋಗಿ ನಿಂತೆನು. ಜಯಶಂಕರನು, ಗುರುತರವಾದ ಕೆಲಸದಲ್ಲಿದ್ದುದರಿಂದ, ಹಿಂದಿರುಗಿ ನನ್ನನ್ನು ನೋಡಲಿಲ್ಲ. ನಾನಾದರೋ ಒಂದು ಗಳಿಗೆಯ ವರೆಗೂ ಆತನು ಮಾಡುತ್ತಿದ್ದ ವಿಷಯ ಪರೀಕ್ಷೆಯನ್ನು ನೋಡುತ್ತಿದ್ದೆನು.

ಕೊಂಚ ಹೊತ್ತಿನ ಮೇಲೆ, ಜಯಶಂಕರನು ಹಿಂದಿರುಗಿ ನೋಡಿ—ಲಲಿತ! ನೀನು ಬಂದುದೇ ನನಗೆ ಗೊತ್ತಾಗಲಿಲ್ಲ. ನಾನು ಬೇರೆಯ ಕೆಲಸದಲ್ಲಿದ್ದುದರಿಂದ, ಆವಾಗ ನೀನು ಬಂದೆಯೆಂಬುದನ್ನು ನಾನರಿಯೆನು. ನನ್ನ ತಪ್ಪೇನಿದ್ದರೂ ಕ್ಷಮಿಸು; ಬಾ, ಈ ಆಸನದ ಮೇಲೆ ಕುಳಿತುಕೊಳ್ಳು, ಎಂದನು.

ನಾನು—(ಆಸನದ ಮೇಲೆ ಕುಳಿತುಕೊಂಡು) ವಿಷಯವೇನು ?

ಜಯ—ಇದೊಂದು ಸಾಮಾನ್ಯವಾದ ಹತ್ಯೆಯ ವಿಚಾರವು. ಇದು ಹಾಗಿರಲಿ. ಏನು ಬಂದುದು? ನಿನ್ನ ಮುಖವನ್ನು ನೋಡಿದರೆ, ಉದ್ದೇಶವು ಸಾಮಾನ್ಯವಲ್ಲವೆಂದು ತೋರುವುದು.

ನಾನು ಜಯಶಂಕರನ ಮಾತಿಗೆ ಏನೊಂದುತ್ತರವನ್ನೂ ಕೊಡದೆ, ಸೋಮ ಸುಂದರನು ನನಗೆ ಬರೆದಿದ್ದ ಪತ್ರವನ್ನು ಅವನ ಕೈಗೆ ಕೊಟ್ಟೆನು. ಅವನು ಅದನ್ನು ಮೊದಲಿನಿಂದ ಕೊನೆಯ ವರೆಗೂ ಓದಿ, 'ಇದರಿಂದ ಅಂತರ್ಯವಾವುದೂ ಚೆನ್ನಾಗಿ ಗೊತ್ತಾಗುವುದಿಲ್ಲ' ಎಂದನು.

ನಾನು—ಅಹುದು, ಚೆನ್ನಾಗಿ ಗೊತ್ತಾಗುವುದಿಲ್ಲ.

ಜಯ—ಏನಾದರೂ ಆಗಲಿ, ಇಚ್ಛಾಪುರಕ್ಕೆ ತೆರಳಲು ನಾನು ಈಗಲೇ ಸಿದ್ಧನಾಗಿರುವೆನು.

ನಾನು—ನಾನು ಮಟ್ಟಿಗೆ ಸಿದ್ಧನಲ್ಲವೇನು ? ನಾನೂ ಎಲ್ಲವನ್ನೂ ಸಿದ್ಧಪಡಿಸಿಕೊಂಡೇ ಬಂದಿರುವೆನು.

ಜಯ—ಹಾಗಾದರೆ ನಾವಿಬ್ಬರೂ ಇಲ್ಲಿಯೇ ಭೋಜನವನ್ನು ತೀರಿಸಿಕೊಂಡು ತೆರಳಬಹುದಷ್ಟೇ ?

ನಾನು—ಊಟದ ಮಾತು ಹಾಗಿರಲಿ. ಹೊಗೆ ಬಂಡಿಯು ಇಲ್ಲಿಂದ ಇಚ್ಛಾಪುರಕ್ಕೆ ಎಷ್ಟು ಹೊತ್ತಿಗೆ ತೆರಳುವುದು ?

ಜಯ—ಬಂಡಿಯು ಮಧ್ಯಾಹ್ನದ ೪ ಗಂಟೆಗೆ ಸರಿಯಾಗಿ ತೆರಳುವುದು. ಅದಕ್ಕಾಗಿ ನಾವು ಈಗಳಿಂದಲೂ ಆತುರರಾಗಿರಬೇಕಾದುದಿಲ್ಲ.

ಬಳಿಕ ನಾನಿಬ್ಬರೂ ಭೋಜನಾದಿಗಳನ್ನು ತೀರಿಸಿಕೊಂಡು ಬರುವುದಕ್ಕೆ ಮನೆಯೊಳಗೆ ಪ್ರವೇಶಮಾಡಿದೆವು. ಭೋಜನಶಾಲೆಯಲ್ಲಿ ಶುಚಿರುಚಿಯಾದ ಭೋಜನವು ಸಿದ್ಧಪಡಿಸಲ್ಪಟ್ಟಿದ್ದಿತು.

---

೩

ಮಧ್ಯಾಹ್ನದ ಊಟವಾದ ಮೇಲೆ ಕೊಂಚ ಹೊತ್ತು ವಿಶ್ರಾಂತಿಯನ್ನೂ ತೆಗೆದುಕೊಂಡು ನಾವಿಬ್ಬರೂ ಹೊಗೆ ಬಂಡಿಯನ್ನೇರಿ ಇಚ್ಛಾಪುರಕ್ಕೆ ಬಂದು ಸೇರಿದೆವು. ಅಲ್ಲಿ ಸೋಮಸುಂದರನಿರುವ ಮನೆಯನ್ನು ಪತ್ತೇಮಾಡಿಕೊಂಡು ಹೋಗಿ ಗಂಟನ್ನಿಳಿಸಿದೆವು. ಆಗ ಅಪರಿಚಿತನೊಬ್ಬನು ನಮ್ಮನ್ನು ಮನೆಯೊಳಗೆ ಬರಮಾಡಿಕೊಂಡು, ಕುಶಲ ಪ್ರಶ್ನೆ ಮುಂತಾದುವುಗಳಿಂದ ನಮ್ಮನ್ನು ಸತ್ಕರಿಸಿದನು. ನಾವು ಆತನ ಅಪ್ಪಣೆಯನ್ನು ತೆಗೆದುಕೊಂಡು ಮನೆಯ ಹಜಾರದಲ್ಲಿ ಕುಳಿತೆವು.

ಮನೆಯ ಯಜಮಾನನಿಗೂ ನಮಗೂ ಕೊಂಚ ಹೊತ್ತು ಲೋಕಾಭಿರಾಮವಾದ ಮಾತುಕತೆಗಳು ನಡೆದುವು. ಮಾತಿನ ಸಂದರ್ಭದಲ್ಲಿ, ಮನೆಯ ಯಜಮಾನನ ಹೆಸರು ನಿಶಾಕಾಂತರಾಯನೆಂದೂ, ಆತನು ತನ್ನ ತವರೂರಾದ ಭಾವನಾಪುರವನ್ನು ತ್ಯಾಗಮಾಡಿ, ಜೀವನಕ್ಕಾಗಿ ಇಚ್ಛಾಪುರದಲ್ಲಿ ಅನೇಕ ವರ್ಷಗಳಿಂದಲೂ ವಾಸವಾಗಿರುವನೆಂದೂ ತಿಳಿದು ಬಂದಿತು.

ಸೋಮಸುಂದರನು ತನ್ನ ಸೋದರಮಾವನ ಮನೆಯನ್ನು ಬಿಟ್ಟು, ಇತರರ ಮನೆಯಲ್ಲಿ ರೋಗದಿಂದ ನರಳುತ್ತಿರುವುದಕ್ಕೆ ಕಾರಣವನ್ನು ವಿಚಾರಿಸಿದುದರಲ್ಲಿ, ತಿಳಿದು ಬಂದುದೇನೆಂದರೆ:—

"ನಿಶಾಕಾಂತರಾಯನಿಗೆ ಹನ್ನೆರಡು ವರ್ಷದ ತಂಗಿಯೊಬ್ಬಳಿರುವಳು. ಆ ಹುಡುಗಿಯನ್ನು ಸೋಮಸುಂದರನಿಗೆ ಕೊಟ್ಟು ವಿವಾಹಮಾಡಬೇಂದು ನಿಶ್ಚಯ ವಾಗಿದ್ದಿತು. ಮದುವೆಯಾಗುವುದಕ್ಕೆ ಮುಂಚಿತವಾಗಿಯೇ, ಸೋಮಸುಂದರನು ನಿಶಾಕಾಂತನ ಮನೆಗೆ ಹೋಗಿ ಬರುತ್ತಿದ್ದನು. ಇಂದಿಗೆ ಎರಡು ವರ್ಷಗಳ ಹಿಂದೆ ಸೋಮಸುಂದರನ ಹೆಂಡಿತಿಯು ಮಹಾಮಾರಿಗೆ ಆಹುತಿಯಾಗಿದ್ದಳು. ಆಕೆಯು ಸತ್ತ ಕೆಲವು ದಿನಗಳೊಳಗಾಗಿಯೇ ಈ ವಿವಾಹದ ಸುದ್ದಿಯೆದ್ದಿತು. ಸೋಮಸುಂದರನೂ ಹುಡುಗಿಯ ಅಂದಚೆಂದವನ್ನು ನೋಡಿ ಆಕೆಯನ್ನು ವರಿಸು ವುದಕ್ಕೆ ಇಷ್ಟಪಟ್ಟಿದ್ದನು.

ನಿಶಾಕಾಂತನ ತಂಗಿಯ ಹೆಸರು ಸರ್ವಮಂಗಳೆ. ಸರ್ವಮಂಗಳೆಗೆ ಹತ್ತನೆಯ ವರ್ಷ ತುಂಬುತ್ತಿರುವಾಗ, ಸೋಮಸುಂದರನಿಗೂ ನಿಶಾಕಾಂತನಿಗೂ ಪ್ರಥಮ ಪರಿಚಯವೇರ್ಪಟ್ಟಿತು. ಅಂದು ಮೊದಲು ಸೋಮಸುಂದರನು ನಿಶಾ ಕಾಂತನ ಮನೆಗೆ ಪ್ರತಿನಿತ್ಯವೂ ಹೋಗಿಬರುತ್ತಿದ್ದನು. ಸರ್ವಮಂಗಳೆಯು ಸೋಮಸುಂದರನ ಬಳಿಯಲ್ಲಿ ಕುಳಿತು ವಿದ್ಯೆಯನ್ನು ಕಲಿಯುತ್ತಿದ್ದಳು. ಸರ್ವ ಮಂಗಳೆಗೆ ಹನ್ನೆರಡನೆಯ ವರ್ಷವು ನಡೆಯುತ್ತಿರುವಾಗ, ಒಂದು ದಿನ ಸೋಮ ಸುಂದರನ ಹೆಂಡಿತಿಯು ಮಾರಿಕಾರೋಗ ತಗುಲಿ ಮಡಿದಳು.

ಅದೇ ಸಂದರ್ಭದಲ್ಲಿ ನಿಶಾಕಾಂತನು ತನ್ನ ತಂಗಿಗೆ ಸರಿಯಾದ ವರನನ್ನು ಹುಡುಕುವುದರಲ್ಲಿದ್ದನು. ಅಷ್ಟರಲ್ಲಿಯೇ ಸೋಮಸುಂದರನ ಹೆಂಡಿತಿಯು ಸತ್ತು ದನ್ನು ನೋಡಿ, ತನ್ನ ತಂಗಿಯನ್ನು ಸೋಮನಿಗೆ ಕೊಟ್ಟು ವಿವಾಹಮಾಡ ಬೇಕೆಂದು ನಿಶ್ಚಯಮಾಡಿಕೊಂಡನು. ಹೆಂಡಿತಿಯು ಸತ್ತಕೂಡಲೆ, ಮತ್ತೆ ಮದು ವೆಯ ವಿಷಯವಾಗಿ ಮಾತನಾಡಿಸುವುದು ಸರಿಯಲ್ಲವೆಂದು ತಿಳಿದು, ನಿಶಾಕಾಂತನು ಕೆಲವು ದಿನಗಳಾದ ಮೇಲೆ ಸೋಮಸುಂದರನನ್ನು ಕುರಿತು, ತನ್ನ ತಂಗಿಯನ್ನು ವಿವಾಹವಾಗಲು ಪ್ರಾರ್ಥಿಸಿದನು. ಮೊದಮೊದಲು ಸೋಮನು ಒಪ್ಪಲಿಲ್ಲ. ಒಂದೆರಡು ತಿಂಗಳುಗಳು ಕಳೆವುದರೊಳಗಾಗಿಯೇ, ಸೋಮಸುಂದರನು ಮನ ಗರಗಿದವನಾಗಿ ಮತ್ತೆ ವಿವಾಹವಾಗುವುದಕ್ಕೆ ಸಮ್ಮತಿಯನ್ನಿತ್ತನು.

ಈ ಮದುವೆಯ ವಿಚಾರವು ನಿಶಾಕಾಂತನಿಗೂ, ಆತನ ತಾಯಿಗೂ, ಹೆಂಡಿ ತಿಗೂ ಗೊತ್ತಿದ್ದಿತೇ ಹೊರತು, ಸರ್ವಮಂಗಳೆಗೆ ಮಟ್ಟಿಗೆ ಗೊತ್ತಿರಲಿಲ್ಲ. ಆದುದ

ರಿಂದಲೇ ಸರ್ವಮಂಗಳೆಯು ಸೋಮಸುಂದರನನ್ನು ನೋಡಿದರೆ ನಾಚುಗೆ ಪಡದೆ, ಎಂದಿನಂತೆಯೇ ಆತನ ಬಳಿಯಲ್ಲಿ ಕುಳಿತು ಪಾಠವನ್ನು ಕಲಿಯುತ್ತಿದ್ದಳು. ಹೀಗೆಯೇ ಒಂದೆರಡು ವರ್ಷಗಳು ಬೇಗಬೇಗನೆಯೇ ಕಳೆದುಹೋದುವು. ಕಂಡ ಕಂಡವರೆಲ್ಲರೂ ಸರ್ವಮಂಗಳೆಗೆ ಇನ್ನೂ ಮದುವೆ ಮಾಡದಿರುವುದಕ್ಕೆ ಕಾರಣ ವೇನೆಂದು ಕೇಳಿದಲ್ಲಿ, 'ವರನು ಸಿದ್ಧನಾಗಿಯೇ ಇರುವನು. ಎಂದಾದರೊಂದು ದಿನ ಮದುವೆಮಾಡಿದರಾಯಿತು,' ಎಂದು ನಿಶಾಕಾಂತನು ಹೇಳಿ ಬಿಡುತ್ತಿದ್ದನು. ಕೇಳಿದವರೆಲ್ಲರೂ, 'ನಮಗೇಕೆ ಇತರರ ವಿಚಾರ' ಎಂದುಕೊಂಡು ಸುಮ್ಮನಾಗಿ ಬಿಡುತ್ತಿದ್ದರು.

ಏನಾದರೂ ಆಗಲಿ ; ಸೋಮಸುಂದರನು ಬರೆದು ಕಳುಹಿದ್ದಂತೆ, ನಾವು ತಡಮಾಡದೆಯೇ ಇಚ್ಛಾಪುರಕ್ಕೆ ಬಂದು ಸೇರಿದೆವು. ಸರಿಯಾದ ಕಾಲದಲ್ಲಿಯೇ ನಾವು ಸೋಮಸುಂದರನಿದ್ದ ಮನೆಗೂ ಬಂದೆವು. ಮನೆಯ ಯಜಮಾನನಾದ ನಿಶಾಕಾಂತರಾಯನು ನಮ್ಮನ್ನು ಗೌರವದಿಂದ ಮನೆಯೊಳಗೆ ಬರಮಾಡಿಕೊಂಡನು. ಆತನೇ ನಮ್ಮ ಸೋಮಸುಂದರನ ಮುಂದಣ ಕಾಲದ ಮೈದುನನಾಗುವುದ ರಲ್ಲಿದ್ದನು.

ನಮ್ಮನ್ನು ನೋಡಿ ನಿಶಾಕಾಂತನು—ಪೂಜ್ಯರೇ! ತಾವು ದೊಡ್ಡ ಮನಸ್ಸು ಮಾಡಿ ಇಲ್ಲಿಗೆ ಬಂದುದನ್ನು ನೋಡಿ ನಮಗೆ ಪರಮಾನಂದವಾದುದು. ನಮ್ಮ ಸೋಮುವು ಈ ದಿನ ಬೆಳಗ್ಗೆ ನಿಮ್ಮನ್ನು ಎಷ್ಟೋ ಸಲ ಸ್ಮರಿಸಿಕೊಂಡನು. ಕಾರ್ಯವಾದರೋ ಬಹಳ ಗುರುತರವಾಗಿರುವುದು, ಎಂದನು.

ಜಯ—ಕಾರ್ಯವಾದರೋ ಗುರುತರವೆಂಬುದನ್ನು ನಾವೂ ಬಲ್ಲೆವು. ವಿಷಯವಾದರೋ ಎಂಥದೆಂಬುದು ನಮಗಿನ್ನೂ ಗೊತ್ತಾಗಿಲ್ಲ.

ನಿಶಾ—ಸೋಮಸುಂದರನಿಂದಲೇ ಎಲ್ಲವೂ ಗೊತ್ತಾಗುವುದು. ನಾನೂ ಈಗಳೇ ನಿಮ್ಮನ್ನು ಆತನಿರುವಲ್ಲಿಗೆ ಕರೆದುಕೊಂಡು ಹೋಗುವೆನು. ನೀವು ಹೊಗೆ ಬಂಡಿಯ ಮೈಲಿಗೆಯನ್ನು ತೆಗೆದುಹಾಕಿ ಶುಚಿಯಾದ ಬಟ್ಟೆಬರೆಗಳನ್ನು ಧಾರಣ ಮಾಡಿ ಕೊಂಚ ಹೊತ್ತು ವಿಶ್ರಮಿಸಿಕೊಳ್ಳೋಣವಾಗಲಿ.

ನಾನು—ವಿಶ್ರಾಂತಿ ಗಿಶ್ರಾಂತಿಗೆ ಕಾಲವಿಲ್ಲ; ಅದರಿಂದ ಪ್ರಯೋ ಜನವೂ ಇಲ್ಲ. ಮೊದಲು ಸೋಮಸುಂದರನನ್ನು ನೋಡಿ ಮಾತನಾಡಿಸದಲ್ಲದೆ, ನಮ್ಮ ಮನವು ನಿಶ್ಚಿಂತವಾಗಲಾರದು.

ಈ ರೀತಿಯಾಗಿ ನಾನಾಡಿದ ಮಾತನ್ನು ಕೇಳಿದ ಕೂಡಲೆ, ನಿಶಾಕಾಂತನು ನಮ್ಮನ್ನು ರೋಗಪೀಡಿತನಾದ ಸೋಮಸುಂದರನು ಆವ ಕೋಣೆಯಲ್ಲಿ ಹಾಸುಗೆ ಹಿಡಿದು ಮಲಗಿದ್ದನೋ, ಆ ಕೋಣೆಯೊಳಗೆ ಕರೆದುಕೊಂಡು ಹೋಗಿ ಬಿಟ್ಟನು.

---

೪

ನಿಶಾಕಾಂತನು ಕರೆದುಕೊಂಡು ಹೋಗಿ ತೋರಿಸಿದ ಮನೆಯೊಳಗೆ ಪ್ರವೇಶ ಮಾಡಿದ ಕೂಡಲೆ, ನಾವಿಬ್ಬರೂ ಅಲ್ಲಿದ್ದ ಅದೊಂದಾಸನದ ಮೇಲೆ ಕುಳಿತುಕೊಂಡೆವು. ಕೂಡಲೆ ಪ್ರಕೃತೋಪಯೋಗಿಯಾದ ಒಂದೆರಡು ಮಾತುಗಳನ್ನಾಡಿದ ಮೇಲೆ, ಸೋಮಸುಂದರನು—ವಿಶೇಷವಾಗಿ ಮಾತುಗಳನ್ನು ಬಳೆಯಿಸುವುದರಿಂದ ಪ್ರಯೋಜನವಿಲ್ಲ. ಕಾಲವು ವ್ಯರ್ಥವಾಗಿ ಕಳೆದುಹೋಗುವುದನ್ನು ನಾನು ಈಗಣ ಸ್ಥಿತಿಯಲ್ಲಿ ಸಹಿಸಿಕೊಂಡಿರಲಾರೆನು. ನಿಮ್ಮನ್ನು ಬರಮಾಡಿಕೊಂಡಿರುವ ಕಾರಣವನ್ನು ನಾನು ಮೊದಲು ತಿಳಿಸಬೇಕೆಂದಿರುವೆನು, ಎಂದು ನುಡಿದನು.

ನಾನು—ಆಗ ಬಹುದು.

ಜಯ—ಅವಶ್ಯವಾಗಿಯೂ ಆಗಬಹುದು.

ಬಳಿಕ ಸೋಮಸುಂದರನು ಹೇಳತೊಡಗಿದನು :—ನಾನು ಪಾಠಶಾಲೆಯನ್ನು ಬಿಟ್ಟ ಮೇಲೆ ಇಲ್ಲಿಗೆ ಬಂದ ಮೊದಲುಗೊಂಡು ಇಲ್ಲಿಯ ವರೆಗೂ ಸುಖವಾಗಿಯೇ ಇದ್ದೆನು. ನಾನು ಕೈಕೊಂಡಿದ್ದ ಕೆಲಸದಲ್ಲಿಯೂ ದಿನದಿನಕ್ಕೆ ಗೌರವವೂ ಹೆಚ್ಚುತ್ತಿದ್ದಿತು. ಹೀಗಿರುವಲ್ಲಿ ನನ್ನ ಸುಖಮಯವಾದ ಸಂಸಾರದಲ್ಲಿ ಇದ್ದಕ್ಕಿದ್ದ ಹಾಗೆಯೇ ನನ್ನ ಹೆಂಡಿತಿಯು ಕಾಲವಾದಳು. ಬಳಿಕ ಮತ್ತೆ ಮದುವೆಯಾಗುವ ಅಭಿಪ್ರಾಯವೇ ನನಗಿರಲಿಲ್ಲ. ಅನೇಕರು ಬಂದು ನಿರ್ಬಂಧಪಡಿಸಿದುದರ ಮೇಲೆ, ನಾನು ಮತ್ತೆ ಮದುವೆ ಮಾಡಿಕೊಳ್ಳಲು ಸಮ್ಮತಿಸಿದೆನು. ಈ ಸಮಯಕ್ಕೆ ಸರಿಯಾಗಿ ಒಂದು ದುರ್ಘಟನೆಯು ಅಕಾಂಡತಾಂಡವವಾಗಿ ಸಂಭವಿಸಿತು. ಅದೇ ನನ್ನ ಸರ್ವನಾಶಕ್ಕೆ ಮೂಲಕಾರಣವಾಗಿ ಪರಿಣಮಿಸಿರುವುದು.

ನಾನು ಇಲ್ಲಿಗೆ ಬಂದ ಕೂಡಲೆ, ನನ್ನ ಸೋದರ ಮಾಮನಲ್ಲಿಯೇ ಕೆಲಸಕ್ಕೆ ಸೇರಿಕೊಂಡೆನು. ನನ್ನ ಬುದ್ಧಿಶಕ್ತಿಯಿಂದ ಕೆಲಸದಲ್ಲಿ ಕಾಲಕ್ರಮದಿಂದ ನನಗೆ ವೃದ್ಧಿಯುಂಟಾಯಿತು. ಕೊನೆಕೊನೆಗೆ ನಾನು ಸೋದರಮಾಮನ ಪೂರ್ಣ ವಿಶ್ವಾಸಕ್ಕೆ ಪಾತ್ರವಾಗಿ ಕೆಲಸವೆಲ್ಲವನ್ನೂ ನನ್ನ ಹೆಸರಿನಲ್ಲಿಯೇ ನಡೆಯಿಸಿ

ಕೊಂಡು ಹೋಗುವಷ್ಟು ಗೌರವವು ಏರ್ಪಟ್ಟಿತು. ವ್ಯಾಪಾರವೂ ನನ್ನ ತಲೆಯ ಮೇಲೆಯೇ ಬಿದ್ದಿತು. ಕೆಲಸವು ನಡೆಯುವ ವಿಷಯದಲ್ಲಿ ನಾನೇ ಉತ್ತರವಾದಿಯಾಗಿಯೂ ನಿಂತೆನು.

ನನ್ನ ಮಾಮನು ಕೆಲಸದ ಭಾರವನ್ನು ನನ್ನ ಮೇಲೆ ವಹಿಸಿ, ತಾನು ವಿಶೇಷ ಲಾಭಕರವಾದ ಜ್ಯೋತಿಷ್ಮತೀ ಎಂಬ ಅಮೂಲ್ಯ ಲೋಹದ ವ್ಯಾಪಾರ ಮಾಡಬೇಕೆಂದು ವಿಲಾಯತಿಯಲ್ಲಿರುವ ಕೋಟೀಶ್ವರರಾದ ವ್ಯಾಪಾರಿಗಳೊಡನೆ ಪತ್ರವ್ಯವಹಾರವನ್ನು ನಡೆಯಿಸತೊಡಗಿರುವನು. ಅದನ್ನು ನಿರ್ಮಾಣಮಾಡತಕ್ಕ ವಿಧಾನವನ್ನೂ, ಅದನ್ನು ಉಪಯೋಗಿಸತಕ್ಕ ಕ್ರಮವನ್ನೂ, ಅದರ ವ್ಯಾಪಾರದಿಂದುಂಟಾಗಬಹುದಾದ ಲಾಭಾಲಾಭಗಳನ್ನೂ, ಅಲ್ಲದೆ, ಅದಕ್ಕೆ ಸಂಬಂಧಪಟ್ಟ ಸಮಸ್ತ ವಿಷಯಗಳನ್ನೂ ಗೋಪ್ಯವಾಗಿ ಪತ್ರದಲ್ಲಿ ಬರೆದಿಡುತ್ತಿರುವನು. ಆತನು ಹೇಳಿದುದರಲ್ಲಿ, ಜ್ಯೋತಿಷ್ಮತಿಯನ್ನು ನಿರ್ಮಾಣಮಾಡಿಸಿ ತರಿಸಿ ವ್ಯಾಪಾರ ಮಾಡುವುದಾದರೆ, ತಿಂಗಳೊಂದಕ್ಕೆ ಮೂವತ್ತು ಸಾವಿರ ರೂಪಾಯಿಗಳಿಗೆ ಕಡಿಮೆಯಿಲ್ಲದ ಹಾಗೆ ಲಾಭವುಂಟಾಗುವುದರಲ್ಲಿ ಆವ ಸಂಶಯವೂ ಇರುವುದಿಲ್ಲವೆಂದು ತಿಳಿದು ಬಂದಿತು.

ಹೀಗಿರಲೊಂದು ದಿನ ನನ್ನ ಸೋದರಮಾಮನಾದ ರಮಾರಮಣನು ನನ್ನನ್ನು ಏಕಾಂತವಾದ ಸ್ಥಲಕ್ಕೆ ಕರೆದುಕೊಂಡು ಹೋಗಿ ನನಗೆ ತಿಳಿಸಿದುದೇನೆಂದರೆ:—ಸೋಮು! ನೀನು ಮಾಡುತ್ತಿರುವ ಕೆಲಸವು ನನಗೆ ಸಮರ್ಪಕವಾಗಿರುವುದು. ನಿನ್ನ ಜಾಗರೂಕತೆಯಿಂದ ನನ್ನ ವ್ಯಾಪಾರವು ದಿನದಿನಕ್ಕೆ ವೃದ್ಧಿಯಾಗುತ್ತಿರುವುದು. ಇದರಿಂದ ನೀನು ನನ್ನ ಪೂರ್ಣವಿಶ್ವಾಸಕ್ಕೆ ಪಾತ್ರವಾಗಿರುವೆ. ಇನ್ನು ಮೇಲೆ ನಾನು ನಿನಗೆ ತಿಳಿಸದೆಯೇ ಆವ ಕೆಲಸವನ್ನೂ ಮಾಡುವುದಿಲ್ಲ. ನೀನಾದರೋ ನನ್ನ ಪೂರ್ಣವಿಶ್ವಾಸವನ್ನು ಕೊನೆಯ ವರೆಗೂ ಕಾಪಿಟ್ಟುಕೊಂಡು ಬರಬೇಕು. ಕೆಲವು ದಿನಗಳಿಂದೀಚೆಗೆ ನಾನು ಕೆಲಸವೆಲ್ಲವನ್ನೂ ನಿನ್ನ ತಲೆಯ ಮೇಲೆಯೇ ಹಾಕಿರುವುದು ನಿನಗೆ ತಿಳಿದೇ ಇದೆಯಷ್ಟೇ? ನಾನು ಹೀಗೆ ಮಾಡಿದುದಕ್ಕೆ ಕಾರಣವೇನೆಂದರೆ:—ನಾನು ವಿಶೇಷವಾಗಿ ಲಾಭಕರವಾದ ಕೆಲಸವನ್ನು ಕೈಕೊಳ್ಳುವುದಕ್ಕಾಗಿ ವಿಲಾಯತಿಯಲ್ಲಿರುವ ಕೋಟೀಶ್ವರರೊಡನೆ ಪತ್ರದಿಂದ ವ್ಯವಹಾರಮಾಡುತ್ತಿರುವೆನು. ಇಲ್ಲಿಯ ವರೆಗೂ ನಮ್ಮ ಭರತಖಂಡದಲ್ಲಿ ಮತ್ತಾರೂ ಈ ವ್ಯಾಪಾರವನ್ನು ಮಾಡಿಲ್ಲ, ಮಾಡುವುದಕ್ಕೆ ತೋರುವುದೂ ಇಲ್ಲ. ಅದುಕಾರಣ ಇದು ಮತ್ತೊಬ್ಬರಿಗೆ ತಿಳಿಯದಂತೆ ನಾನು ಕೆಲಸ ಮಾಡಬೇಕು. ಒಂದು ವೇಳೆ ಈ ಗುಟ್ಟು ರಟ್ಟಾಗುವುದಾದರೆ, ನನಗೆ ತುಂಬಾ ನಷ್ಟವಾಗುವುದಲ್ಲದೆ, ಆ ಕೋಟೀಶ್ವರರಲ್ಲಿ ನನ್ನ ಗೌರವವೂ ಕಾಸಿಗಿಂತಲೂ ಕಡೆಯಾಗಿ

ಹೋಗುವುದು. ಆದುದರಿಂದ ನನಗೆ ನಷ್ಟವಾಗದಂತೆಯೂ, ಹಾಗೂ ನನ್ನ ಗೌರವಕ್ಕೆ ಕುಂದು ಬಾರದಂತೆಯೂ ನೋಡಿಕೊಳ್ಳುವುದು ನಿನ್ನ ಕೆಲಸವಾಗಿರುವುದು. ಈ ವಿಷಯಗಳನ್ನು ನಾವು ನಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ರಕ್ಷಿಸಿಕೊಳ್ಳಬೇಕಾದುದು ಅತ್ಯಾವಶ್ಯಕವಾಗಿರುವುದು. ಹಾಗೆ ರಕ್ಷಿಸಿಕೊಂಡರೆ, ನಮಗೆ ತಿಂಗಳೊಂದಕ್ಕೆ ಅಪರಿಮಿತವಾಗಿ ಲಾಭ ಬಂದು, ಕೊಂಚ ಕಾಲವೆನ್ನುವುದರೊಳಗಾಗಿ ನಾವು ಧನಕುಬೇರರಾಗಬಹುದು. ಹಾಗಾಗುವುದಾದರೆ, ನಮ್ಮ ವಂಶದಲ್ಲಿ ಆರೂ ದರಿದ್ರರೆಂಬುವರೇ ಇರುವುದಿಲ್ಲ. ನನ್ನ ಎಲ್ಲಾ ಕೆಲಸಗಳಲ್ಲಿಯೂ ನೀನು ನನಗೆ ಸಹಾಯನಾಗಬೇಕಾಗಿರುವುದರಿಂದ, ಈ ಗೋಪ್ಯವಾದ ವ್ಯಾಪಾರದ ಮರ್ಮವನ್ನು ನಿನಗೆ ಮೊದಲೇ ತಿಳಿಸಿರುವೆನು. ಎಚ್ಚರಿಕೆ!

---

## ೫

## (ಪೂರ್ವ ಕಥಾನುಬಂಧ)

"ನನ್ನ ಸೋದರಮಾವನು ಈ ರೀತಿಯಾಗಿ ವ್ಯಾಪಾರದ ರಹಸ್ಯವನ್ನು ಹೇಳುತ್ತಿರುವಲ್ಲಿ, ನನ್ನ ಮೈಯೆಲ್ಲವೂ ಥರಥರನೆ ನಡುಗುತ್ತಿದ್ದಿತು. ದೈವಯೋಗದಿಂದ ಹಿಂದೆ ಗೌರವವು ಬಂದಿತು. ಮುಂದೆಯೂ ಅದೇ ರೀತಿಯಲ್ಲಿ ಗೌರವವು ಬರುವುದೆಂದು ಹೇಗೆ ನಂಬಿಕೊಂಡಿರುವುದಕ್ಕೆ ಸಾಧ್ಯವು? ಕಾಲದೇಶಗಳ ಸ್ಥಿತಿಗತಿಗಳು ಹೇಗಿರುವುವೋ ಬಲ್ಲವರಾರು? ಎಲ್ಲಾ ಕಾಲದಲ್ಲಿಯೂ ಜನರ ಸ್ವಭಾವವು ಒಂದೇ ರೀತಿಯಲ್ಲಿರುವುದೆಂದು ಆರು ತಾನೇ ಹೇಳಬಲ್ಲವರಾಗಿರುವರು? ಎಂದು ಮುಂತಾಗಿ ಆಲೋಚಿಸಿದಾಗಲೆಲ್ಲಾ, ನನ್ನ ಹೃದಯದಲ್ಲಿ ಅನಿರ್ವಚನೀಯವಾದದೊಂದು ಭೀತಿಯು ತಲೆದೋರುತ್ತಿದ್ದಿತು.

ರಮಾರಮಣನು ನನಗೆ ಹೇಳಬೇಕಾದ ಬುದ್ಧಿವಾದವೆಲ್ಲವನ್ನೂ ಹೇಳಿದ ಬಳಿಕ, ಒಂದು ಕಬ್ಬಿಣದ ಸಂದೂಕದಿಂದ ಪತ್ರದ ಗಂಟೊಂದನ್ನು ಹೊರಗೆ ತೆಗೆದು ನನ್ನ ಕೈಗೆ ಕೊಟ್ಟು, 'ಇದರಲ್ಲಿಯೇ ನಾನು ಹೇಳಿದ ಸಮಸ್ತ ವಿಷಯವೂ ಅಡಗಿರುವುದು. ಈವತ್ತಿನ ವರೆಗೂ ಈ ಸಂಗತಿಯು ನಮ್ಮ ಭರತಖಂಡದಲ್ಲಿ ಮತ್ತಾರಿಗೂ ತಿಳಿಯದು. ಕೊಂಚ ಸುಳು ಗೊತ್ತಾಗುವುದಾದರೂ ನಾನು ಮುಳುಗಿಯೇ ಹೋಗುವೆನು. ಈ ಪತ್ರವು ನನ್ನಲ್ಲಿರುವುದೆಂಬುದು ಇತರರಿಗೆ ಗೊತ್ತಾದ ಕೂಡಲೆ, ಕೋಟಿಗಟ್ಟಲೆ ರೂಪಾಯಿಗಳನ್ನು ವೆಚ್ಚಮಾಡಿಯಾದರೂ ಸ್ವಕಾರ್ಯವನ್ನು ನೆರವೇರಿಸಿಕೊಳ್ಳುವ ಜನರು ಅನೇಕರಿರುವರು. ಆದುದರಿಂದಲೇ ನಾನು ಈ ಪತ್ರವನ್ನು ಕಬ್ಬಿಣದ ಪೆಟ್ಟಿಗೆಯಿಂದ ಹೊರಗೆ ತೆಗೆಯುವುದೇ

ಇಲ್ಲ. ಅದರ ಪ್ರತಿಲಿಪಿಯೊಂದು ಬೇಕಾಗಿದ್ದುದರಿಂದ ನಿನಗೆ ತಿಳಿಸಬೇಕಾಯಿತು,' ಎಂದು ಹೇಳಿ, 'ನೀನು ಕುಳಿತುಕೊಳ್ಳುವ ಕೋಣೆಯಲ್ಲಿ ಕಬ್ಬಿಣದ ಪೆಟ್ಟಿಗೆಯೊಂದು ಇದೆಯಲ್ಲವೇ ? ' ಎಂದು ಪ್ರಶ್ನೆಮಾಡಿದನು.

ನಾನು—ಇದೆ.

ರಮಾ—ಹಾಗಾದರೆ ಈ ಪತ್ರವನ್ನು ಅದರಲ್ಲಿ ಭದ್ರಪಡಿಸಿಡುವೆನು. ಇಲ್ಲಿಯ ಜನರೆಲ್ಲರೂ ಹೊರಗೆ ಹೋದ ಮೇಲೆ, ನೀನು ಬಾಗಿಲುಗಳನ್ನು ಹಾಕಿಕೊಂಡು ಪೆಟ್ಟಿಗೆಯಿಂದ ಪತ್ರವನ್ನು ಹೊರಗೆ ತೆಗೆದು ಪ್ರತಿಲಿಪಿಯೊಂದನ್ನು ಮಾಡು. ಹೀಗೆ ಮಾಡುವುದರಿಂದ ಆರಿಗೂ ಗೊತ್ತಾಗುವುದಿಲ್ಲ. ಕೆಲಸವೂ ಹೆಚ್ಚಿನ ತೊಂದರೆಯಿಲ್ಲದೆಯೇ ನೆರವೇರಿ ಹೋಗುವುದು. ಪ್ರತಿಲಿಪಿಯು ಮುಗಿದ ಮೇಲೆ, ಎಲ್ಲವನ್ನೂ ಮೊದಲಿನಂತೆ ಪೆಟ್ಟಿಗೆಯಲ್ಲಿ ಎಚ್ಚರಿಕೆಯಿಂದಿಟ್ಟು ಸರಿಯಾಗಿ ಬೀಗ ಹಾಕಿಕೊಂಡು ಹೊರಡು. ನಾಳೆ ಬೆಳಗಾಗುವುದರೊಳಗಾಗಿ ಆ ಪತ್ರವನ್ನೂ ಅದರ ಪ್ರತಿಲಿಪಿಯನ್ನೂ ಮರೆಯದೇ ನನಗೆ ನೀನು ತಂದುಕೊಡಬೇಕು.

ನಾನು ಮಾಮನ ಅಪ್ಪಣೆಯಂತೆ ಕೆಲಸವನ್ನು ಮಾಡತೊಡಗಿದೆನು. ಕೆಲಸಗಾರರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋಗುವ ವರೆಗೂ ನಾನು ಆ ಕೆಲಸಕ್ಕೆ ಕೈಹಾಕಲಿಲ್ಲ. ಕ್ರಮಕ್ರಮವಾಗಿ ಎಲ್ಲರೂ ಹೊರಟರು. ಒಬ್ಬ ಗುಮಾಸ್ತನು ಮಾತ್ರ, ಕೆಲಸವು ಬಹಳವಾಗಿದ್ದುದರಿಂದ, ಅಲ್ಲಿಯೇ ಬಲು ಹೊತ್ತು ಇದ್ದುಕೊಂಡು ಕೆಲಸಮಾಡಲಾರಂಭಿಸಿದನು. ಆತನನ್ನು ಬೇಗ ಹೋಗೆಂದು ಹೇಳುವುದಕ್ಕೆ ನನಗೆ ಧೈರ್ಯವು ಸಾಲದೇ ಹೋಯಿತು. ಅದು ಕಾರಣ ನಾನು ಆವ ಮಾತನ್ನೂ ಆಡದೆ ಹೊರಗೆ ಬಂದು ಪ್ರಧಾನ ಸೇವಕನನ್ನು ಕಂಡು, ಒಂದು ಬಂಡಿಯನ್ನು ಬಾಡಿಗೆಗೆ ತೆಗೆದುಕೊಂಡು ಬರುವಂತೆ ಹೇಳಿದೆನು. ಒಂದು ನಿಮಿಷವೆನ್ನುವುದರೊಳಗಾಗಿ ಗಾಡಿಯೂ ಬಂದು ಸೇರಿತು. ನಾನು ಅದರಲ್ಲಿ ಕುಳಿತು ಸೇವಕನನ್ನು ಕುರಿತು—ಗುಮಾಸ್ತನು ತನ್ನ ಕೆಲಸವನ್ನು ಮುಗಿಸಿಕೊಂಡು ಹೊರಟು ಹೋದ ಮೇಲೆ, ನೀನು ಬಾಗಿಲುಗಳನ್ನು ಬಂಧಿಸಬೇಡ. ನನಗೆ ಇನ್ನೂ ಬಹಳ ಕೆಲಸವಿರುವುದರಿಂದ, ನಾನು ಇಲ್ಲಿಗೆ ಮತ್ತೆ ಅರ್ಧಘಂಟೆಯೊಳಗಾಗಿಯೇ ಬಂದುಬಿಡುವೆನು, ಎಂದು ಹೇಳಿ ಮನೆಗೆ ತೆರಳಿದೆನು. ಬಳಿಕ ಅರ್ಧಘಂಟೆಯೊಳಗಾಗಿಯೇ ನಾನು ಭೋಜನವನ್ನು ತೀರಿಸಿಕೊಂಡು ಕಾರ್ಯಸ್ಥಾನಕ್ಕೆ ಬಂದೆನು."

ಜಯ—ಅಷ್ಟು ಹೊತ್ತಿಗೆ ಗುಮಾಸ್ತನು ಹೊರಟು ಹೋಗಿದ್ದನಲ್ಲವೇ?

ನಾನು—ಅಹುದು, ಹೊರಟು ಹೋಗಿದ್ದನು. ನಾನು ಬರುವುದಕ್ಕೆ ಹತ್ತೆಂಟು ನಿಮಿಷಗಳ ಹಿಂದೆ ಆತನು ಹೊರಟು ಹೋದನೆಂದು ನನಗೆ ತಿಳಿಯ ಬಂದಿತು. ಅಲ್ಲಿ ಮತ್ತಾರೂ ಇಲ್ಲದಿರುವುದನ್ನು ನೋಡಿ, ಇದೇ ಸರಿಯಾದ ಸಮಯವೆಂದು ನಾನು ಸಂದೂಕದಿಂದ ಗೋಪ್ಯವಾದ ಆ ಪತ್ರವನ್ನು ಹೊರಗೆ ತೆಗೆದು ಪ್ರತಿಲಿಪಿಯನ್ನು ಮಾಡುವುದಕ್ಕೆ ಕುಳಿತೆನು. ನನ್ನ ಸೋದರಮಾವನು ಹೇಳಿದ ವಿಷಯವೆಲ್ಲವೂ ಅದರಲ್ಲಿದ್ದಿತು. ನಾನು ಅದರ ಪ್ರತಿಲಿಪಿಯನ್ನು ಮಾಡು ವುದಕ್ಕೆ ಬಲು ಹೊತ್ತು ಹಿಡಿಯಿತು.

---

೬

(ಪೂರ್ವ ಕಥಾನುಬಂಧ)

ರಾತ್ರಿಯಲ್ಲಿ ಹತ್ತು ಗಂಟೆ ಹೊಡೆಯಿತು. ಆದರೂ ಕೆಲಸವು ಮುಗಿಯ ಲಿಲ್ಲ. ಬಳಿಕ ನನಗೇನೂ ದಿಕ್ಕೇ ತೋರದೆ ಪ್ರಧಾನ ಸೇವಕನನ್ನು ಕೂಗಿದೆನು.

ಜಯ—ಆತನನ್ನು ಕೂಗಲು ಕಾರಣವೇನು ?

ನಾನು—ಹಗಲೆಲ್ಲಾ ವ್ಯೆಮುರಿದು ಕೆಲಸಮಾಡಿ ಮಾಡಿ ಬೇಸತ್ತು ಸತ್ತು ಹೋಗಿರುವೆನು. ಒಬ್ಬ ಮನುಷ್ಯನು ಮಾಡುವ ಕೆಲಸಕ್ಕೆ ಮಿತಿಯಿಲ್ಲವೇ ? ಇಲ್ಲ, ಪರಾಧೀನತೆಯಲ್ಲಿ ಮಿತಿಯಿಲ್ಲ. ಹೇಳಿದ ಕೆಲಸವೆಲ್ಲವನ್ನೂ ಮಾಡಲೇ ಬೇಕು. ಬೆಳಗಿನಿಂದ ರಾತ್ರಿಯಲ್ಲಿ ಹತ್ತು ಗಂಟೆಯ ವರೆಗೂ ಎಡೆಬಿಡದೆ ಕೆಲಸಮಾಡಿದೆನು. ಆದರೂ ಕೆಲಸವು ಮುಗಿಯದಿರಲು, ನನಗೆ ತುಂಬಾ ಬೇಸರವುಂಟಾಗಿ ತಂಬಾ ಕನ್ನು ಸೇವಿಸಬೇಕೆಂಬ ಆಸೆಯಿಂದ ಪ್ರಧಾನ ಸೇವಕನನ್ನು ಕೂಗಿದೆನು. ಆದರೆ ನನ್ನ ಕೂಗಿಗೆ ಆರೂ ಉತ್ತರ ಕೊಡಲಿಲ್ಲ. ನಾನು ಮತ್ತೊಂದು ಸಲ ಗಟ್ಟಿ ಯಾಗಿ 'ಆರಲ್ಲಿ?' ಎಂದು ಕೂಗಿದೆನು. ನಾನು ಎರಡನೆಯ ಸಲ ಕೂಗಿದೊಡ ನೆಯೇ, ಸಾಧಾರಣವಾದ ಸೀರೆಯನ್ನುಟ್ಟುಕೊಂಡಿದ್ದ ಎಣ್ಣೆಬಣ್ಣದ ಹೆಂಗು ಸೊಬ್ಬಳು ನನ್ನಿದಿರಿನಲ್ಲಿ ಬಂದು ನಿಂತಳು. ನಾನು ಆಕೆಯನ್ನು ನೋಡಿದ ಕೂಡಲೆ ಆಕೆಯು ಪ್ರಧಾನಸೇವಕನ ಹೆಂಡಿತಿಯಾಗಿರಬೇಕೆಂದು ನಿಶ್ಚಯಿಸಿಕೊಂಡೆನು. ಬಲು ಹೊತ್ತಾಗಿದ್ದುದರಿಂದ ಸೇವಕನು ಊಟಕ್ಕಾಗಿ ಮನೆಗೆ ಹೋಗಿ, ತಾನು ಬರುವ ವರೆಗೂ ತನ್ನ ಸ್ಥಾನದಲ್ಲಿ ಹೆಂಡಿತಿಯನ್ನಿಟ್ಟಿರಬಹುದೆಂದು ನಾನು ಕಾರಣ ವನ್ನು ಊಹಿಸಿಕೊಂಡವನಾಗಿ, ಆಕೆಯನ್ನು ಕುರಿತು—ನೀನು ಕೆಳಗೆ ಹೋಗಿ, ಆರಾದರೂ ಎದ್ದಿದ್ದರೆ, ಅವರ ಕಡೆಯಿಂದ ತೀಡಿದ ತಂಬಾಕನ್ನು ಕೇಳಿ ತೆಗೆದು

ಕೊಂಡು ಬಾ, ಎಂದು ಹೇಳಿದೆನು. ಆಕೆಯು ಅಪ್ಪಣೆಯೆಂದು ಹೊರಟು ಹೋದಳು. ನಾನು ಮತ್ತೆ ಕೊಂಚ ಹೊತ್ತು ಕೆಲಸಕ್ಕೆ ಕುಳಿತೆನು. ಆದರೂ ಆಕೆಯು ಬರಲಿಲ್ಲ. ಅಷ್ಟು ಹೊತ್ತಿಗೆ ನನ್ನ ಕಾಲು ಜೋಮು ಹಿಡಿಯಿತು. ಆ ಮೇಲೆ ನಾನು ಕೆಲಸ ಮಾಡಲು ಉತ್ಸಾಹವಿಲ್ಲದವನಾಗಿ ಆ ಕೋಣೆಯಲ್ಲಿಯೇ ತಿರುಗಾಡಿದೆನು. ಎಷ್ಟು ಹೊತ್ತು ನಿರೀಕ್ಷಿಸಿ ನೋಡಿದರೂ, ತಂಬಾಕು ಬರಲೇ ಇಲ್ಲ. ಹೋದ ಹೆಂಗುಸು ಕೂಡ ಬರಲಿಲ್ಲ. ನೀರನ್ನಾದರೂ ಕುಡಿದು ಬರೋಣ ವೆಂದು ನಾನು ನೀರಿನ ಮನೆಯ ಕಡೆಗೆ ಹೋದೆನು.

ಜಯ—ಆ ಸಮಯದಲ್ಲಿ ರಮಾರಮಣನ ಕೋಣೆಯ ಬಾಗಿಲಿಗೆ ಬೀಗ ಹಾಕಿದ್ದಿತೇ ?

ನಾನು—ಆವುದಕ್ಕೂ ಬೀಗಹಾಕಿರಲಿಲ್ಲ. ಪ್ರತಿ ದಿನವೂ ಬೀಗ ಹಾಕುವ ಪದ್ಧತಿಯಿದ್ದರೂ, ಈ ದಿನ ಮಾತ್ರ ನನ್ನ ಅಪ್ಪಣೆಯ ಮೇರೆ ಪ್ರಧಾನ ಸೇವಕನು ಆವುದಕ್ಕೂ ಬೀಗ ಹಾಕಿರಲಿಲ್ಲ.

ಜಯ—ಸೇವಕರೆಲ್ಲರೂ ರಮಾರಮಣನ ಮನೆಯಲ್ಲಿಯೇ ಇರುವರೇ ? ಇಲ್ಲವೆ, ಬೇರೆ ಇರುವರೇ ?

ನಾನು—ಮದುವೆಯಾದವರು ಬೇರೆ ಇರುವರು. ಮದುವೆಯಾಗ ದವರು ಆ ಮನೆಯಲ್ಲಿಯೇ ಇರುವರು.

ಜಯ—ಎಷ್ಟು ಮಂದಿ ಸೇವಕರಿರುವರು ?

ನಾನು—ಇಪ್ಪತ್ತೈದು ಮಂದಿ.

ಜಯ—ಮನೆಯಲ್ಲಿರುವರೆಷ್ಟು ? ಹೊರಗಿರುವರೆಷ್ಟು ?

ನಾನು—ಎಂಟು ಹತ್ತು ಮಂದಿಗಳು ಮಟ್ಟಿಗೆ ಹೊರಗಿರುವರು ; ಉಳಿದವರು ಆ ಮನೆಯಲ್ಲಿಯೇ ಇರುವರು.

ಜಯ—ಅವರ ಮನೆಗಳು ತಮಗೆ ಗೊತ್ತೋ ?

ನಾನು—ಎಲ್ಲರದೂ ಗೊತ್ತಿಲ್ಲ.

ಜಯ—ಅವರಲ್ಲಿ ಎಷ್ಟು ಮಂದಿ ಕಾರ್ಯಸ್ಥಾನಕ್ಕೆ ಸೇರಿದವರು ? ಎಷ್ಟು ಮಂದಿ ಮನೆಯ ಕೆಲಸವನ್ನು ಮಾಡುವರು ?

ನಾನು—ಮೂರು ಮಂದಿ ಮಟ್ಟಿಗೆ ಕಾರ್ಯಸ್ಥಾನಕ್ಕೆ ಸಂಬಂಧಪಟ್ಟವರು ; ಉಳಿದವರು ಮನೆಗೆ ಸೇರಿದವರು.

ಜಯ—ಮನೆಯ ಸೇವಕರು ಕಾರ್ಯಸ್ಥಾನದ ಕೆಲಸವನ್ನು ಆವಾಗಲಾದರೂ ಮಾಡುವುದುಂಟೇ ?

ನಾನು—ಇಲ್ಲವೆಂದೇ ಹೇಳಬೇಕು. ಕಾರ್ಯಸ್ಥಾನದ ಸೇವಕರು ಇಲ್ಲದಿರುವಾಗ, ಕಾರ್ಯಸ್ಥಾನದ ಕೆಲಸವು ಅಧಿಕವಾಗಿದ್ದಲ್ಲಿ, ಮನೆಯ ಸೇವಕರನ್ನು ಕರೆಯಿಸಿಕೊಂಡು ಕೆಲಸವನ್ನು ನೆರವೇರಿಸಿಕೊಳ್ಳುತ್ತಿದ್ದೆವು.

ಜಯ—ಕಾರ್ಯಸ್ಥಾನದ ಸೇವಕರೆಲ್ಲರಿಗೂ ಮದುವೆಯಾಗಿರುವುದಲ್ಲವೇ ?

ನಾನು—ಇಬ್ಬರಿಗೆ ಆಗಿರುವುದು. ನಾನು ಆ ರಾತ್ರಿಯಲ್ಲಿ ಮಾತನಾಡಿಸಿದ ಹೆಂಗುಸು ಒಬ್ಬನ ಹೆಂಡಿತಿ.

ಜಯ—ಸರಿ ಸರಿ ; ಮುಂದಕ್ಕೆ ತಾವು ಹೇಳೋಣವಾಗಲಿ. ನಾನು ಆಗಿಂದಾಗ ತೊಂದರೆಕೊಟ್ಟದಕ್ಕಾಗಿ, ನನ್ನನ್ನು ಕ್ಷಮಿಸೋಣವಾಗಲಿ. ನಾನು ವಿಷಯಗಳನ್ನು ಪರಿಚಯಮಾಡಿಕೊಳ್ಳುವುದಕ್ಕಾಗಿ ಹೀಗೆಲ್ಲಾ ಕೇಳಬೇಕಾಗುವುದು. ಆಗ್ರಹ ಮಾಡದೆ ಮುಂದಣ ಸಂಗತಿಗಳನ್ನು ತಿಳಿಸೋಣವಾಗಲಿ.

---

## ೭

## (ಪೂರ್ವ ಕಥಾನುಬಂಧ)

'ಪ್ರಸಿದ್ಧನಾದ ಪತ್ತೇದಾರನೆನಿಸಿದ ಜಯಶಂಕರನು ಮೇಲಿಂದ ಮೇಲೆ ಹೀಗೆ ಸಂಬಂಧಪಡದ ಪ್ರಶ್ನೆಗಳನ್ನು ಕೇಳಿದುದಕ್ಕಾಗಿ ನನಗೆ ತುಂಬಾ ಜುಗುಪ್ಸೆಯುಂಟಾಯಿತು ; ಆದರೆ ನನ್ನ ಮನೋಭಾವವನ್ನು ಮಟ್ಟಿಗೆ ಹೊರಗೆ ತೋರ್ಪಡಿಸಿಕೊಳ್ಳಲಿಲ್ಲ. ಕಾರಣವೇನೆಂದರೆ:—ಬುದ್ಧಿಮಂತರಾದ ಪತ್ತೇದಾರರು ಆವುದೋ ಒಂದು ವಿಷಯವನ್ನು ಮನದಲ್ಲಿಟ್ಟುಕೊಂಡು, ಆವುದೋ ಪ್ರಶ್ನೆ ಮಾಡುವರು. ಅದರಿಂದ ಅವರು ಸ್ವಕಾರ್ಯವನ್ನು ಹೇಗೋ ಸಾಧಿಸಿಕೊಂಡು ಬಿಡುವರು. ಆದರ ವಿಷಯವು ನಮಗೆ ಗೊತ್ತಾಗಲೊಲ್ಲದು. ಅವರು ಅಸಂಬದ್ಧವಾದ ಪ್ರಶ್ನೆಯನ್ನು ಕೇಳಿದ ಮಾತ್ರಕ್ಕೆ, ನಾವು ಅವರನ್ನು ಮೂಢರೆಂದು

ಕರೆಯಲಿಕ್ಕಾದೀತೇ? ನಾವು ಇತರರ ಯೋಗ್ಯತೆಯ ವಿಷಯವಾಗಿ ಮಾತನಾಡಿ ಕೊಳ್ಳುವುದೇ ತಪ್ಪು,' ಎಂದು ಮನದಲ್ಲಿ ನಿಶ್ಚಯಮಾಡಿಕೊಂಡು, ನನ್ನ ಭಾವ ವನ್ನು ಹೊರಪಡಿಸದೆಯೇ ಮುಂದಣ ಸಂಗತಿಯನ್ನು ಹೇಳ ತೊಡಗಿದೆನು.

"ನಾನು ನನ್ನ ಕೋಣೆಯನ್ನು ಬಿಟ್ಟು ಹೊರಗೆ ಬಂದು ನೀರಿನ ಮನೆಯ ಕಡೆಗೆ ಹೋದೆನು. ಅಲ್ಲಿ ನನ್ನ ದುರದೃಷ್ಟಕ್ಕೆ ಸರಿಯಾಗಿ ನೀರಿರಲಿಲ್ಲ. ನಾನು ಅಲ್ಲಿಂದ ಹೊರಗೆ ಬಂದು ಪ್ರಧಾನ ಸೇವಕನನ್ನು ನೋಡಿದೆನು. ಅವನು ಅಲ್ಲಿರ ಲಿಲ್ಲ. ಮನೆಯೊಳಗಾದರೂ ಆರಾದರೂ ಸೇವಕರು ಇರುವರೋ ಇಲ್ಲವೋ ಎಂಬುದನ್ನು ತಿಳಿದುಕೊಂಡು ಬರುವುದಕ್ಕೋಸ್ಕರ ಮಹಡಿಯಿಂದ ಕೆಳಗಿಳಿದೆನು. ಬಾಗಿಲಲ್ಲಿ ನಿಂತಿದ್ದ ಪಹರೆಯವನು ಒಂದು ಮೂಲೆಯಲ್ಲಿ ಒರಗಿಕೊಂಡು ತೂಕಡಿ ಸುತ್ತಿದ್ದನು. ಮತ್ತಾರೂ ನನ್ನ ಕಣ್ಣಿಗೆ ಕಾಣಿಸಲಿಲ್ಲ. ನಾನು ಪಹರೆಯವ ನನ್ನು ಒಂದು ಸಲ ಕೂಗಿದೆನು. ಅವನು ಮಾತನಾಡಲಿಲ್ಲ. ಮತ್ತೊಂದು ಸಲ ಕೂಗಿದೆನು. ಆದರೂ ಅವನು ಮಾತನಾಡಲಿಲ್ಲ. ಆ ಮೇಲೆ ನಾನು ಆತ ನನ್ನು ತಟ್ಟಿ ಎಬ್ಬಿಸಿದೆನು. ಪಹರೆಯವನು ದಿಗಿಲು ಬಿದ್ದೆದ್ದು ನನ್ನನ್ನು ಬೇಡಿ ಕೊಳ್ಳಲಾರಂಭಿಸಿದನು. ನಾನು ಅವನೊಡನೆ ಮತ್ತಾವ ಮಾತನ್ನೂ ಆಡದೆ, ತಂಬಾಕನ್ನು ತೀಡಿಕೊಡೆಂದು ಕೇಳಿದೆನು.

ಪಹರೆ—(ನಡುಗುತ್ತಾ) ಅಪ್ಪಣೆ; ಒಬ್ಬ ಹೆಂಗುಸು ತಮಗಾಗಿ ತಂಬಾ ಕನ್ನು ತೆಗೆದುಕೊಂಡು ಈಗ ತಾನೇ ಹೋದಳು.

ನಾನು—(ಕೋಪದಿಂದ) ತಂಬಾಕನ್ನು ತೀಡಿಕೊಡೆಂದು ಆಕೆಗೆ ಹೇಳಿ ದವರಾರು? ಅವಳಾರೋ ನನಗೆ ತಿಳಿಯದು. ನಾನು ಪ್ರಧಾನ ಸೇವಕನನ್ನು ಕೂಗಿದಾಗ, ಆ ಹೆಂಗುಸು ಮುಂದೆ ಬಂದು ನಿಂತಳು. ತೀಡಿದ ತಂಬಾಕನ್ನು ತೆಗೆದುಕೊಂಡು ಬರುವಂತೆ ಅಪ್ಪಣೆ ಮಾಡಿದೆನು. ಈಗ ಅವಳೆಲ್ಲಿಗೆ ಹೋದಳು?

ಪಹರೆ—ತಂಬಾಕನ್ನು ತೆಗೆದುಕೊಂಡು ಆಕೆಯು ತಮ್ಮಲ್ಲಿಗೇ ಹೊರ ಟಳು.

ನಾನು—ಆಕೆಯನ್ನು ಮತ್ತೆ ಕಾಣಲೇ ಇಲ್ಲ.

ಪಹರೆ—ಹಾಗಾದರೆ ಆಕೆಯು ಎಲ್ಲಿಗೆ ಹೋದಳೋ, ಅದನ್ನು ನಾನು ಕಾಣೆನು.

ನಾನು—ಕೆಲಸದ ಮೇಲೆ ಗಮನವಿಲ್ಲದೆಯೇ ನಿದ್ದೆ ಮಾಡುವುದಾದರೆ ಗೊತ್ತಾದ ಹಾಗೆಯೇ ಸರಿ. ಹೀಗಾದರೆ ನೀನು ಕೆಲಸ ಮಾಡುವುದೇನು?

ಮನೆಗೆ ಕಳ್ಳರು ಬಿದ್ದರೂ ನಿನಗೆ ಗೊತ್ತಾಗುವುದಿಲ್ಲ. ನಿನಗೆ ಹೇಳುವವರೂ ಕೇಳುವವರೂ ಆರೂ ಇಲ್ಲವೆಂದು ತೋರುವುದು. ಈ ಸಂಗತಿಯನ್ನು ಯಜಮಾನನಿಗೆ ತಿಳಿಸಲೇ ಬೇಕಾಗುವುದು.

ಈ ಮಾತನ್ನು ಕೇಳಿದ ಕೂಡಲೆ, ಪಹರೆಯವನು ನಡುಗುತ್ತಾ ತಂಬಾಕನ್ನು ಕೈಯಲ್ಲಿ ಹಿಡಿದುಕೊಂಡು—ಸ್ವಾಮಿ! ದಯೆಯಿಟ್ಟು ಈ ಸಲಕ್ಕೆ ಮನ್ನಿಸಬೇಕು. ನನ್ನದು ದೊಡ್ಡ ತಪ್ಪಾಯಿತು. ಮುಂದಕ್ಕೆ ಇಂತಹ ತಪ್ಪುಗಳನ್ನು ಎಂದಿಗೂ ಮಾಡುವುದಿಲ್ಲ, ಎಂದು ಸುರಿದನು.

ಪಹರೆಯವನು ಈ ಮಾತುಗಳನ್ನಾಡುತ್ತಿರುವಾಗಲೇ ತಂಬಾಕನ್ನು ತೀಡಿ ನನ್ನ ಕೈಗೆ ಕೊಟ್ಟನು. ಬಳಿಕ ಅವನು ನನ್ನ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು, ತನ್ನ ಹೊಟ್ಟೆಯ ಮೇಲೆ ಹೊಡೆಯಕೂಡದೆಂದು ಕಣ್ಣೀರ ಸುರಿಸುತ್ತಾ ಬೇಡಿಕೊಂಡನು. ಆತನ ಮೇಲೆ ಕೋಪಮಾಡುವುದಕ್ಕೆ ನನಗೆ ಮನವೊಡಂಬಡಲಿಲ್ಲ. ತರುವಾಯ ನಾನು ಪಹರೆಯವನನ್ನು ಕುರಿತು—ಇಷ್ಟು ಜನ ಸೇವಕರು ಕೆಲಸಕ್ಕಿರುವಾಗ, ಹೆಂಗುಸನ್ನು ಕಾರ್ಯಸ್ಥಾನಕ್ಕೆ ಬರುವಂತೆ ಹೇಳಿದವರಾರು? ಇದನ್ನು ನಾನು ತಿಳಿದುಕೊಳ್ಳಬೇಕು. ಬೇಗನೆ ಸೇವಕನನ್ನು ಕರೆಯಿಸಿ ನನ್ನ ಬಳಿಗೆ ಕಳುಹು, ಎಂದು ಹೇಳಿ ನನ್ನ ಸ್ಥಲಕ್ಕೆ ಹೊರಟು ಹೋದೆನು. ಅಲ್ಲಿ ಉಳಿದಿರುವ ಕೆಲಸವನ್ನು ಪೂರ್ತಿಗೊಳಿಸುವುದಕ್ಕೋಸ್ಕರ ಪತ್ರವನ್ನು ನೋಡಿದೆನು. ಅಕಟಕಟ! ಆ ಪತ್ರವು ಅಲ್ಲಿರಲಿಲ್ಲ. ಆಗ ನನ್ನ ಪ್ರಾಣವೇ ಹಾರಿಹೋಯಿತು. ಭಯದಿಂದ ನನ್ನ ಶರೀರವೆಲ್ಲವೂ ನಡುಗಲಾರಂಭಿಸಿತು. ತಲೆಯು ತಿರುಗಿದಂತಾಯಿತು. ನಾನು ಈ ಯಾತನೆಯನ್ನು ತಡೆಯಲಾರದೆ, ಕೈಗಳಲ್ಲಿ ತಲೆಯನ್ನಿಟ್ಟುಕೊಂಡು ಕುಳಿತುಬಿಟ್ಟೆನು.



# ಎರಡನೆಯ ಭಾಗ

---

## ೧

## (ಲಲಿತಮೋಹನನ ಹೇಳಿಕೆ)

ಸೋಮಸುಂದರ ಮಹಾಶಯನು ಹೇಳಿದ ವೃತ್ತಾಂತವೆಲ್ಲವನ್ನೂ ಸಾವಧಾನದಿಂದ ಕೇಳಿ, ಜಯಶಂಕರನು ಕೊಂಚ ಹೊತ್ತು ಆಲೋಚಿಸಿದ ಬಳಿಕ—ಮಹಾಶಯ! ಇಷ್ಟಾದ ಮೇಲೆ ತಾವು ಏನ ಮಾಡೋಣವಾಯಿತು? ಎಂದು ಕೇಳಿದನು.

ಸೋಮ—ನಾನು ನನ್ನ ಕೋಣೆಗೆ ಹೋಗಿ ಆಸನದ ಮೇಲೆ ಕುಳಿತು ಪತ್ರವನ್ನು ನೋಡಿದೆನು. ಅದು ಅಲ್ಲಿರಲಿಲ್ಲ. ಆವನೋ ಗುರುತುಕಂಡ ಕಳ್ಳನು ದಫ್ತರದ ಕೋಣೆಯಿಂದ ನನ್ನ ಕೋಣೆಗೆ ಬಂದು ಪತ್ರವನ್ನು ಸವರಿಸಿಕೊಂಡು ಹೋಗಿರಬೇಕು. ನನ್ನ ಮಾಮನ ಕೋಣೆಯಿಂದ ನನ್ನ ಕೋಣೆಗೆ ಕಳ್ಳನು ಬರುವುದಾದರೆ, ಕಳ್ಳತನವು ಸಿಕ್ಕಿಹೋಗುವುದು. ಆವಾಗಲೂ ದಫ್ತರದ ಕೋಣೆಯ ಬಾಗಿಲು ತೆರೆದಿರುವುದು. ಅಲ್ಲಿಯೇ ಆರೋ ಅವಿತುಕೊಂಡಿದ್ದು, ನಾನು ಹೊರಗೆ ಬಂದ ಕೂಡಲೆ, ನನಗೆ ಸರ್ವನಾಶವನ್ನುಂಟುಮಾಡಿರಬೇಕು.

ಜಯ—ಈ ಸಂದರ್ಭದಲ್ಲಿ ನಾನು ತಮಗೊಂದು ಪ್ರಶ್ನೆಯನ್ನು ಕೇಳುವೆನು. ತಾವು ಆಸನದ ಮೇಲೆ ಕುಳಿತುಕೊಂಡು ಪತ್ರವನ್ನು ಹುಡುಕಿದರಷ್ಟೆ. ಪತ್ರವು ಸಿಕ್ಕದಿರಲು, ಆರೋ ಕದ್ದುಕೊಂಡು ಹೋಗಿರಬೇಕೆಂದು ನಿಮಗೆ ಸಂಶಯವು ತೋರಿಬಂದ ಕೂಡಲೆ, ನೀವು ಸುತ್ತುಮುತ್ತಲೂ ಹುಡುಕಿದರೇನು?

ಸೋಮ—ನೀವು ಕೇಳುವ ಮಾತು ಚೆನ್ನಾಗಿದೆ! ಹುಡುಕದೇ ಆರಿದ್ದಾರು? ಎಲ್ಲಾ ಕಡೆಗಳಲ್ಲಿಯೂ ಹುಡುಕಿ ಹುಡುಕಿ ಸಾಕಾಯಿತು. ಎಲ್ಲಿಯಾದರೂ ಒಂದು ಇಲಿಯ ಬೊಕ್ಕೆ ಇದ್ದರೂ, ಅದನ್ನು ಕೂಡ ಅಗೆದು ಹಾಕಿ ಹುಡುಕಾಡಿದೆನು. ಎಲ್ಲಿಯೂ ಆರೂ ಸಿಕ್ಕಲಿಲ್ಲ.

ಜಯ—ಆ ಮೇಲೆ?

ಸೋಮ—ನಾನು ಮತ್ತೆ ಮಹಡಿಯನ್ನು ಹತ್ತಿದಾಗ ಪಹರೆಯವನೂ ನನ್ನ ಹಿಂದೆ ಹಿಂದೆಯೇ ಬಂದನು. ನನ್ನ ಕೋಣೆಯಲ್ಲಿ ನನಗುಂಟಾದ ದುರವಸ್ಥೆಯನ್ನು ನೋಡಿ, ಅವನೂ ಚಕಿತನಾಗಿ ಏನೋ ದುರ್ಘಟನೆಯು ನಡೆದು

ಹೋಗಿರಬೇಕೆಂದು ತಿಳಿದು ನನ್ನ ದುಃಖದಲ್ಲಿ ದುಃಖಿತನಾದನು. ಬಳಿಕ ಅವನೂ ನನ್ನ ಜತೆಯಲ್ಲಿಯೇ ಹುಡುಕಲಾರಂಭಿಸಿದನು. ಮನೆಯಲ್ಲಿ ಆರೂ ಸಿಕ್ಕದಿರಲು, ನಾವಿಬ್ಬರೂ ಹೊರಗೆ ಓಡಿ ಬಂದೆವು. ಮನೆಯಿಂದ ಗಲ್ಲಿಯೊಳಗೆ ಹೋಗುವುದಕ್ಕೆ ಅನುಕೂಲವಾಗಿರಲೆಂದು ಪ್ರಾಚೀರ (ಮನೆಯ ಸುತ್ತಲೂ ಇರುವ ಗೋಡೆ) ದಲ್ಲಿ ಒಂದು ಬಾಗಿಲಿದ್ದಿತು. ನಾವಿಬ್ಬರೂ ಅಲ್ಲಿಗೆ ಹೋಗಿ ನೋಡಿದೆವು. ಬಾಗಿಲಿಗೆ ಅಗಳಿ ಹಾಕಿರಲಿಲ್ಲ. ಅದನ್ನು ನೋಡಿದ ಕೂಡಲೆ ನನ್ನ ಸಂಶಯವು ಇಮ್ಮಡಿಸಿತು. ಆರೋ ಕಳ್ಳರು ಗಲ್ಲಿಯಿಂದ ಮನೆಯೊಳಗೆ ನುಗ್ಗಿ ಬಂದು ಮಹಡಿಯ ಮೇಲಕ್ಕೆ ಹತ್ತಿಹೋಗಿ ನನ್ನ ಗುಪ್ತವಾದ ಪತ್ರವನ್ನು ಕದ್ದುಕೊಂಡು ಗಲ್ಲಿಯ ಮೂಲಕವಾಗಿಯೇ ಓಡಿಹೋಗಿರಬೇಕೆಂದು ನಾವಿಬ್ಬರೂ ನಿಶ್ಚಯಮಾಡಿಕೊಂಡೆವು.

ಜಯ—ಆ ಮೇಲೆ ತಾವೇನ ಮಾಡಿದಿರಿ ?

ಸೋಮ—ನನಗೆ ಆ ವೇಳೆಯಲ್ಲಿ ಸಲಹೆ ಕೊಡುವವರು ಆರಾದರೂ ಇದ್ದಲ್ಲಿ, ನನಗೆ ತುಂಬಾ ಉಪಕಾರವಾಗುತ್ತಿದ್ದಿತು. ನಾನು ಅಷ್ಟು ಹೊತ್ತಿನಲ್ಲಿ ಆರನ್ನು ತರಲಿ? ಆ ಸಮಯಕ್ಕೆ ಸರಿಯಾಗಿ ಪಕ್ಕದ ಮನೆಯ ಗಡಿಯಾರದಲ್ಲಿ ರಾತ್ರಿಯ ಹನ್ನೊಂದು ಗಂಟೆಯು ಹೊಡೆಯಿತು. ಕತ್ತಲೆಯೋ ಹೇಳಲೇ ಕೆಲಸವಿಲ್ಲ. ಪ್ರಕೃತಿಯಾದರೋ ನಿಶ್ಶಬ್ದವಾಗಿ ಹೋಗಿರುವುದು. ಇದರ ಮೇಲೆ ಮಳೆಯ ಸೋನೆ ಬೇರೆ. ಹಾದಿ ಬೀದಿಗಳಲ್ಲಿ ನೀನೇ ಎಂಬುವರು ಮೊದಲೇ ಇಲ್ಲ. ಈ ಅವೇಳೆಯಲ್ಲಿ ನಾನು ಕೊಂಚ ಧೈರ್ಯವನ್ನು ತೆಗೆದುಕೊಂಡು ಗ್ರಾಮರಕ್ಷಾಧಿಕಾರಿಗೆ ತಿಳಿಸುವುದಕ್ಕೆ ಹೊರಟೆನು. ದಾರಿಯಲ್ಲಿ ಒಬ್ಬ ಯಾಮಿಕನು ದೈವಯೋಗದಿಂದ ಸಿಕ್ಕಿದನು. ನಾನು ಆತನನ್ನು ಕಂಡ ಕೂಡಲೆ, 'ಕಳ್ಳತನ ಕಳ್ಳತನ! ನಮ್ಮ ಕಾರ್ಯಸ್ಥಾನದಲ್ಲಿ ಅಮೂಲ್ಯವಾದ ಪತ್ರಗಳು ಕಳುವಾಗಿರುವುವು. ಕಳ್ಳತನ ಕಳ್ಳತನ! ಎಂದು ಕೂಗಿಕೊಂಡೆನು. ಯಾಮಿಕನು ಇನ್ನೂ ಹತ್ತಿರಕ್ಕೆ ಬಂದು, 'ಅದೇನು ಅದೇನು ?' ಎಂದು ಕೇಳಿದನು. ನಾನು ಅದಕ್ಕೆ 'ನಮ್ಮ ಮನೆಯಲ್ಲಿ ಈಗ ತಾನೇ ಕಳ್ಳತನವಾಗಿದೆ; ಆರಾದರೂ ಈ ಗಲ್ಲಿಯ ಮೂಲಕವಾಗಿ ಓಡಿಹೋದರೇ ? ಎಂದು ಚಕಿತ ಚಕಿತನಾಗಿ ಪ್ರಶ್ನೆಮಾಡಿದೆನು.

ಯಾಮಿಕ—ನಾನು ಈಗ ತಾನೇ ಕೆಲಸದ ಮೇಲೆ ಬರುತ್ತಿರುವೆನು. ನಮ್ಮಲ್ಲಿ ಹನ್ನೊಂದು ಗಂಟೆಗೆ ಸರಿಯಾಗಿ ಸರದಿಯು ಪ್ರಾರಂಭವಾಗುವುದು. ಇದಕ್ಕೆ ಮೊದಲಿದ್ದವನು ಮನೆಗೆ ಹೊರಟು ಹೋದನು. ನಾನು ಬರುತ್ತಿರುವಾಗ, ಹೆಂಗುಸೊಬ್ಬಳು ಈ ದಾರಿಯಿಂದ ಮನೆಗೆ ಹೋಗುತ್ತಿದ್ದಳು. ಪ್ರಾಯಿಕವಾಗಿ ಆಕೆಯು ದೊಡ್ಡ ಮನುಷ್ಯರ ಮನೆಯ ಕೆಲಸಗಾತಿಯಿದ್ದಿರಬಹುದು. ಕೆಲಸ

ವನ್ನು ತೀರಿಸಿಕೊಂಡು ಮನೆಯ ಕಡೆಗೆ ಹೋಗುತ್ತಿರಬಹುದೆಂದು ನಾನು ಆಕೆಯನ್ನು ಮಾತನಾಡಿಸಲಿಲ್ಲ.

ಸೋಮ—ಅವಳೇ ಅವಳೇ! ಕಳ್ಳರು ಇನ್ನಾರು ಬರುವರು! ಖಂಡಿತವಾಗಿಯೂ ಅವಳೇ ಕಳ್ಳಿಯು. ಅವಳು ಆವ ಕಡೆ ಹೋದಳು? ಬೇಗನೆ ಹೇಳು.

ಯಾಮಿಕ—ನಾನು ಅವಳನ್ನು ನೋಡಿದುದುಂಟು; ಆದರೆ ಅವಳು ಆವ ಕಡೆಗೆ ಹೋದಳೆಂಬುದು ನನಗೆ ತಿಳಿಯದು. ಅವಳನ್ನು ಹಿಂಬಾಲಿಸಿಕೊಂಡು ಹೋಗಲು, ಆಕೆಯಲ್ಲಿ ನನಗೆ ಮೊದಲು ಆವ ಸಂಶಯವೂ ತೋರಿಬರಲಿಲ್ಲ. ಆಕೆಯಾದರೋ ಬೇಗಬೇಗನೆ ಮನೆಯ ಕಡೆಗೆ ಹೋಗುತ್ತಿದ್ದಳು. ಇಷ್ಟು ಮಾತ್ರವೇ ನನಗೆ ತಿಳಿದಿರುವುದು.

ಆಗ ಮನೆಯ ಪಹರೆಯವನು ನನ್ನನ್ನು ಕುರಿತು—ಬುದ್ಧಿ! ಆಕೆಯ ಮನೆಯು ನನಗೆ ಗೊತ್ತು. ತಾವು ಬರುವುದಾದರೆ ನಾನು ತೋರುವೆನು, ಎಂದನು.

ಇಷ್ಟನ್ನು ಕೇಳಿದ ಕೂಡಲೆ ಸೋಮಸುಂದರನು ದಿಕ್ಕುದಿವಾಣವಿಲ್ಲದವನಾಗಿ ಗಡಿಬಿಡಿಯಿಂದ ಪಹರೆಯವನ ಹಿಂದೆ ಹಿಂದೆಯೇ ಆ ಹೆಂಗುಸಿನ ಮನೆಯ ಕಡೆಗೆ ತೆರಳಿದನು.

---

## ೨

## (ಸೋಮಸುಂದರನ ಪೂರ್ವ ಕಥಾನುಬಂಧ)

ವೇಗದಿಂದ ಹೋಗುತ್ತಿದ್ದ ಆವ ಹೆಂಗುಸನ್ನು ಯಾಮಿಕನು ನೋಡಿದನೋ, ಆಕೆಯು ನಿಜವಾಗಿಯೂ ನಮ್ಮ ಪ್ರಧಾನ ಸೇವಕನ ಹೆಂಡಿತಿಯಾಗಿರಬೇಕೆಂದು ನಿಶ್ಚಯಮಾಡಿಕೊಂಡೆನು. ಬಳಿಕ ನಾವು ಸಾಧ್ಯವಾದಷ್ಟು ಬೇಗನೆ ಆಕೆಯ ಮನೆಯನ್ನು ಕುರಿತು ತೆರಳಿದೆವು. ಅಲ್ಲಿ ಹುಡುಕಿ ನೋಡಲಾಗಿ, ಏನೂ ಫಲವಾಗಲಿಲ್ಲ. ಅಷ್ಟರಲ್ಲಿಯೇ ಯಾಮಿಕನು ಗ್ರಾಮರಕ್ಷಾಧಿಕಾರಿಯ ಠಾಣೆಗೆ ವರ್ತಮಾನ ಕೊಟ್ಟಿದ್ದನು ನಾವು ಅಲ್ಲಿರುವಾಗಲೇ, ಗ್ರಾಮರಕ್ಷಾಧಿಕಾರಿಯು ನಾಲ್ಕಾರು ಮಂದಿ ಯಾಮಿಕರನ್ನು ಜತೆಯಲ್ಲಿ ಕರೆದುಕೊಂಡು ಬಂದು ಸೇರಿದನು. ಅವರೆಲ್ಲರೂ ಸೇರಿಕೊಂಡು ಮನೆ, ಬಾಗಿಲು, ಪೆಟ್ಟಿಗೆ, ಪೆಠಾರಿ, ಗುಡಾಣ, ಕುಡಿಕೆ, ಮಡಕೆ, ತಪ್ಪಲೆ, ತಂಬಿಗೆ ಮುಂತಾದುವೆಲ್ಲವನ್ನೂ ಜಾಲಾಡಿ ನೋಡಿದರು. ಇದರಿಂದ ಆವ ಪ್ರಯೋಜನವೂ ಆಗದಿರಲು, ನಾವಿಬ್ಬರೂ ಅಧಿಕಾರಿಗೆ ಇದ್ದ ಸಂಗತಿಯನ್ನು ತಿಳಿಸಿ ಮನೆಗೆ ಬಂದು ಬಿಟ್ಟೆವು.

ನಾನು ಮನೆಗೆ ಹಿಂದಿರುಗಿ ಬರುತ್ತಿರುವಾಗ, ನನ್ನ ಮುಂದಣ ಪರಿಣಾಮದ ವಿಚಾರವಾಗಿ ಆಲೋಚನೆಗಿಟ್ಟಿತು. ಮತ್ತಾವ ತೊಂದರೆಗೀಡಾಗಬೇಕೋ ಎಂದು ನನ್ನ ಮೈಯೆಲ್ಲವೂ ಥರಥರನೆ ನಡುಗಿ ಹೋಯಿತು. ಬಲವತ್ತರವಾದ ಈ ಭಯದಿಂದ ನನ್ನ ಬುದ್ಧಿಯಲ್ಲಿ ವಿಕಾರವುಂಟಾಗಲಾರಂಭವಾಯಿತು. ಆ ಹೆಂಗುಸೇ ಇಷ್ಟು ಕೆಲಸವನ್ನು ಮಾಡಿರುವುದರಿಂದ, ಅವಳನ್ನು ಹಿಡಿದು ಕೊಂಡರೆ, ಎಲ್ಲವೂ ಸಿಕ್ಕಿಹೋಗುವುದೆಂಬುದೊಂದು ಭರವಸೆಯಿದ್ದಿತು. ಈಗ ಅದೂ ಮಾಯವಾಗಿಬಿಟ್ಟಿತು. ನನ್ನ ಮಾಮನು ಹೇಳಿದ್ದ ಒಂದೊಂದು ಮಾತೂ ಜ್ಞಾಪಕಕ್ಕೆ ಬಂದು ನನ್ನ ಮರ್ಮವನ್ನು ಕತ್ತರಿಸಲಾರಂಭಮಾಡಿತು.

ಲೋಕದಲ್ಲಿ ಜನರಿಗೆ ಕಷ್ಟವು ಬರುವುದುಂಟು. ಅದರಿಂದ ಜನರು ಪಾರಾಗುವುದೂ ಉಂಟು, ಆದರೆ ನನ್ನ ಕಷ್ಟಕ್ಕೆ ಮಟ್ಟಿಗೆ ಪಾರವೆಂಬುದೇ ಇರ ಲಿಲ್ಲ. ಇದರಿಂದ ನಾನು ಕಿಡುವುದಲ್ಲದೇ, ನನ್ನ ಮಾಮನೂ ಕೆಟ್ಟು ಹೋಗು ವನು. ಅವನ ಸರ್ವನಾಶವೇ ನನ್ನ ಸರ್ವನಾಶವು. ಅವನ ಮಾನಹಾನಿಯೇ ನನ್ನ ಪ್ರಾಣ ಹಾನಿಯು. 'ಹಾ ದೈವವೇ ! ಎಂತಹ ವಿನಾಶವನ್ನು ತಂದೊಡ್ಡಿದೆ ? ನನ್ನ ಏಳಿಗೆಯಲ್ಲ ನಿನಗೆ ಸ್ಮರಣೆಯಿಲ್ಲದೇ ಹೋದುದೇ? ನೀನೂ ಇಂತಹ ದುರ್ಮಾರ್ಗದಲ್ಲಿ ವರ್ತಿಸಿ ಜನರನ್ನು ಹಿಂಸೆಪಡಿಸುವುದಾದರೆ, ಲೋಕದಲ್ಲಿ ಉಳಿ ದಿರುವುದೇನು? ಈಗಳಾದರೂ ಹೇಳು; ನಾನು ಮಾಡಿರುವ ಅಪರಾಧವಾದರೂ ಏನು ? ನಿರಪರಾಧಿಗಳನ್ನು ಹೀಗೆ ಗೋಳಿಡಿಸುವುದು ನಿನಗೆ ಎಂದಿಗೂ ತರವಲ್ಲ. ಇದರ ಮೇಲೆ ನಿನ್ನ ಇಷ್ಟ' ಎಂದು ಮುಂತಾಗಿ ಹಂಬಲಿಸುತ್ತಾ, ನಾನು ಇದ್ದ ಲ್ಲಿಯೇ ಮೂರ್ಛೆಗೊಂಡು ಬಿದ್ದು ಬಿಟ್ಟೆನು. ನಾಲ್ಕಾರು ಮಂದಿ ಯಾಮಿಕರು ಸೇರಿಕೊಂಡು ನನ್ನನ್ನು ಶೈತ್ಯೋಪಚಾರಗಳಿಂದ ಸಂತೈಸಿದರು. ಇದಾವುದ ರಿಂದಲೂ ನನ್ನ ಬುದ್ಧಿಯು ಮೊದಲಿನ ಸ್ಥಿತಿಗೆ ಬರಲಿಲ್ಲ.

ರಮಾರಮಣನ ಮನೆಗೆ ಮತ್ತೆ ಹೋಗಲು ನನಗೆ ಕಾಲೇ ಬರಲಿಲ್ಲ. ಒಂದು ಕಡೆ ನಾಚುಗೆ, ಇನ್ನೊಂದು ಕಡೆ ಭಯ, ಮತ್ತೊಂದು ಕಡೆ ಬುದ್ಧಿಯಲ್ಲಿ ಭ್ರಾಂತಿ, ಮಗುದೊಂದು ಕಡೆ ಶರೀರದಲ್ಲ ನಿತ್ರಾಣ ; ನಾನು ಈ ಯವಸ್ಥೆಯಲ್ಲಿರು ವಾಗ, ನನ್ನನ್ನು ನಿಶಾಕಾಂತರಾಯನ ಮನೆಗೆ ಕರೆದುಕೊಂಡು ಹೋಗಿ ಬಿಡುವಂತೆ ಯಾಮಿಕರನ್ನು ಕೇಳಿಕೊಂಡೆನು. ಅವರು ನನ್ನನ್ನು ನಿಶಾಕಾಂತನ ಮನೆಗೆ ಕರೆತಂದು ಬಿಟ್ಟರು. ಅನಂತರದಲ್ಲಿ ಏನು ನಡೆಯಿತೋ ನನಗಾವುದೂ ಗೊತ್ತಿಲ್ಲ.

ನಿಶಾಕಾಂತರಾಯನು ನನ್ನನ್ನು ರಕ್ಷಿಸುವುದಕ್ಕಾಗಿ ಬೇಕಾದ ಹಾಗೆ ಹಣ ವನ್ನು ವೆಚ್ಚಮಾಡಿದನು. ಆವುದಕ್ಕೇನೂ ಕೊರತೆಯಾಗಲಿಲ್ಲ; ಮಾಡಬೇಕಾ ದುದೆಲ್ಲವೂ ಮಾಡಿಯಾಯಿತು. ಮಾನ, ಮರ್ಯಾದೆ, ಗೌರವ, ವಿಶ್ವಾಸ, ಸಂಸಾರ

ಸುಖ, ಬದುಕಬೇಕೆಂಬ ಆಸೆ, ಇವುಗಳೆಲ್ಲವೂ ಮಾಯವಾದುವೇ ಹೊರತು ಮತ್ತಾವುದೂ ಲೋಪವಾಗಲಿಲ್ಲ. ವಿಶ್ವಾಸಘಾತುಕ, ಚಂಡಾಲ, ನೀಚ, ಮನೆ ಮುರುಕ, ಕೊಲೆಪಾತಕ ಮುಂತಾದ ಉಪಾಧಿಗಳು ನನ್ನ ಬೆನ್ನಬಿದ್ದುವು.

ಈಗ ನಾನಿರುವ ಮನೆಯು ನಿಶಾಕಾಂತರಾಯರದು. ನಾನು ಜ್ಞಾನತಪ್ಪಿ ಇಲ್ಲಿಗೆ ಬಂದು ಬಿದ್ದಂದಿನಿಂದಲೂ ಇಲ್ಲಿಯೇ ಇರುವೆನು. ನಾನು ಇಲ್ಲಿರುವುದಕ್ಕೆ ಇದೇ ಕಾರಣವೇ ಹೊರತು, ಮತ್ತೇನೂ ಅಲ್ಲ. ಸರ್ವಮಂಗಳೆಯನ್ನು ನನಗೆ ಕೊಟ್ಟು ವಿವಾಹವಾಗುವುದೆಂಬುದು ಆಕೆಗೆ ಗೊತ್ತಿದೆಯೋ ಇಲ್ಲವೋ ನನಗೆ ತಿಳಿಯದು. ಆದರೂ ಆಕೆಯು ನನ್ನ ದುರಂತವಾದ ದುರವಸ್ಥೆಯಲ್ಲಿ ಮಾಡಿದ ಪರಮ ಪವಿತ್ರವಾದ ಸೇವೆಯನ್ನು ಕುರಿತು ವರ್ಣಿಸಲು ನಾನು ಕಲಿ ತಿರುವ ಮಾತೇ ಸಾಲದು. ಆಕೆಗೆ ಹಗಲ ಹೊತ್ತಿನಲ್ಲಿ ಹೊತ್ತು ಹೊತ್ತಿಗೆ ಸರಿ ಯಾಗಿ ಭೋಜನೋಪಚಾರಗಳಿಲ್ಲ; ರಾತ್ರಿಯಲ್ಲಿ ಕಣ್ಣುತುಂಬಾ ನಿದ್ರೆಯೆಂಬುದೇ ಇಲ್ಲ. ಆಕೆಯು ಸಣ್ಣ ಹುಡುಗಿಯಾದರೂ, ಅವಳ ಧೈರ್ಯವನ್ನು ಎಷ್ಟೆಂದು ವರ್ಣಿಸಲಿ! ನನಗೆ ಔಷಧವನ್ನು ಕೊಡುತ್ತಿದ್ದ ವೈದ್ಯಶಿಖಾಮಣಿಯು, ಆಕೆ ಯನ್ನು ಬಲುವಾಗಿ ಕೊಂಡಾಡಿ, ಆಕೆಯಿಂದಲೇ ನನ್ನ ಪ್ರಾಣವುಳಿದುಕೊಂಡಿ ತೆಂದು ಹೇಳಿದನು. ಈ ಪ್ರಾಣವು ಹೋಗಿದ್ದಿದ್ದರೆ ಚೆನ್ನಾಗಿರುತ್ತಿದ್ದಿತು. ಯಾವಜ್ಜೀವವೂ ನಿಂದೆಗೆ ಪಾತ್ರವಾದ ಈ ದೇಹವು ಇದ್ದರೇನು? ಇಲ್ಲದಿದ್ದರೇನು?

ಆವ ದಿನ ನನಗೆ ಮೊದಲು ಜ್ಞಾನೋದಯವಾಯಿತೋ, ಆವ ದಿನ ರೋಗದ ಬಾಧೆಯು ಕೊಂಚಮಟ್ಟಿಗೆ ಕಡಮೆಯಾಗಿ, ಸರ್ವನಾಶದ ವಿಚಾರವು ಮನ ದಲ್ಲಿ ಸಂಚಾರಮಾಡಲುಪಕ್ರಮಿಸಿತೋ, ಆ ದಿನವೇ ನಾನು ಗ್ರಾಮರಕ್ಷಾಧಿಕರಣ ದಲ್ಲಿ ಸಮಾಚಾರ ಕೊಟ್ಟೆನು. ಆ ಕೂಡಲೆ ಒಬ್ಬ ಗ್ರಾಮರಕ್ಷಾಧಿಕಾರಿಯೂ ಒಬ್ಬ ಪತ್ತೇದಾರನೂ ಬಂದು, 'ಎಷ್ಟು ಪ್ರಯತ್ನಮಾಡಿದರೂ ಏನೂ ಪ್ರಯೋಜನ ವಾಗಲಿಲ್ಲ. ಆ ಹೆಂಗುಸನ್ನು ಹಿಡಿದು ಹಿಂಡಿದೆವು; ಅಲ್ಲದೆಯೂ ಆಕೆಗೆ ಸಲ್ಲದ ಯಾತನೆಯನ್ನುಂಟುಮಾಡಿದೆವು. ಕಾರ್ಯಸಾಧನೆಗಾಗಿ ರಕ್ಷಾಧಿಕಾರಿಗಳು ಮಾಡಬೇಕಾದುದೆಲ್ಲವನ್ನೂ ಮಾಡಿ ನೋಡಿದೆವು. ಅವುದರಿಂದಲೂ ಏನೂ ಪ್ರಯೋಜನವಾಗಲಿಲ್ಲ,' ಎಂದು ಹೇಳಿಬಿಟ್ಟು ಬಂದ ದಾರಿ ಹಿಡಿದು ಹೊರಟೇ ಹೋದರು. ನಾನು ಆಗಲೇ ಆತ್ಮಹತ್ಯೆಯನ್ನು ಮಾಡಿಕೊಳ್ಳತಕ್ಕವನು; ಆದರೆ ತಮ್ಮ ಸಂಗಡ ಈ ವಿಷಯವನ್ನು ವಿಚಾರಮಾಡದೆ ದುಡುಕುವುದು ಸರಿ ಯಲ್ಲವೆಂದು ತಿಳಿದು ತಮ್ಮನ್ನು ಕರೆ ಕಳುಹಿಸಿದೆನು. ತಾವೂ ದೊಡ್ಡ ಮನಸ್ಸು ಮಾಡಿ ಇಲ್ಲಿಗೆ ಬರೋಣವಾಯಿತು. ತಾವೇನಾದರೂ ನನಗೆ ಧೈರ್ಯ ಕೊಡುವು ದಾದರೆ ನಾನು ಬದುಕಿರುವೆನು. ತಾವೂ ಕೈಬಿಡುವುದಾದರೆ ನನ್ನ ಯತ್ನದಲ್ಲೇ

ನಿರುವುದು ? ನಾನು ಮಾನ ಮರ್ಯಾದೆಗಳಿಗೆ ಹೇಗೆ ಜಲಾಂಜಲಿಯನ್ನು ಕೊಟ್ಟೆನೋ, ಹಾಗೆಯೇ ಎಂದಾದರೊಂದು ದಿನ ಈ ಪ್ರಾಣಗಳಿಗೂ ಕೊಟ್ಟು ಬಿಡುವೆನು.

---

೩

(ಜಯಶಂಕರನ ಹೇಳಿಕೆ)

ಸೋಮಸುಂದರನು ಮೇಲ್ಕಂಡ ರೀತಿಯಲ್ಲಿ ಮಾತನಾಡಿ ಮತ್ತೆ ಹಾಸುಗೆ ಯಲ್ಲಿ ಮಲಗಿದನು. ರೋಗದಿಂದ ನರಳುತ್ತಿದ್ದ ಸೋಮಸುಂದರನು ಇಷ್ಟು ದೂರ ಮಾತನಾಡಿದುದೇ ಹೆಚ್ಚು. ಇಷ್ಟು ಮಾತನಾಡುವುದರಲ್ಲಿಯೇ ಆತನಿಗೆ ಇದ್ದ ಶಕ್ತಿಯೆಲ್ಲವೂ ಕುಂದಿಹೋಯಿತು. ಆದುದರಿಂದಲೇ ಆತನು ನಿಶ್ಚೇ ತನನಾಗಿ ಹಾಸುಗೆಯಲ್ಲಿ ಮಲಗಿಬಿಟ್ಟನು. ಅದನ್ನು ನೋಡಿ ಲಲಿತಮೋಹನನು ಸಮೀಪದಲ್ಲಿದ್ದ ಶಕ್ತಿಪ್ರದಾಯಿನಿಯೂ ಶಾಂತಿವಿಧಾಯಿನಿಯೂ ಆದ ಔಷಧವನ್ನು ಸೋಮಸುಂದರನಿಗೆ ಕುಡಿಸಿದನು. ಆ ಕೂಡಲೆ ಸೋಮನ ದೇಹದಲ್ಲಿ ಬಲ ಸಂಚಾರವುಂಟಾಯಿತು.

ಅನಂತರದಲ್ಲಿ ನಾನು ಕೇಳಿದುದೇನೆಂದರೆ :—"ತಾವು ಹೇಳಿದುದೆಲ್ಲವೂ ವಿಶದವಾಗಿದೆ. ಅದರ ಮೇಲೆ ಆವ ಸಂಶಯವೂ ಉಂಟಾಗುವುದಿಲ್ಲ. ಆದರೂ ನಾನೊಂದು ವಿಷಯವನ್ನು ಕೇಳಬೇಕೆಂದಿರುವೆನು. ಆವ ದಿನ ನಿಮ್ಮ ಮಾವ ನವರು ಆ ಪತ್ರವನ್ನು ಕೊಡುವಾಗ ಏನೇನ ಮಾತುಗಳನ್ನಾಡಿ, ಆ ಕಾರ್ಯದ ಭಾರವನ್ನು ನಿಮ್ಮ ಮೇಲೆ ಹೊರಿಸಿದ್ದರೋ, ಅದೇ ದಿನ ಆ ಸಂಗತಿಯನ್ನು ನೀವು ಮತ್ತಾರಿಗಾದರೂ ತಿಳಿಸಿದಿರಾ ?"

ಸೋಮ—ಇಲ್ಲ ; ಕಳ್ಳತನವಾದ ಮೇಲೆ ನಡೆದ ಸಂಗತಿಯನ್ನು ನಿಶಾ ಕಾಂತರಾಯನಿಗೆ ತಿಳಿಸಿದೆನೋ ಇಲ್ಲವೋ ಅದೂ ತಿಳಿಯದು.

ನಾನು—ಸರ್ವಮಂಗಳೆಗೇನಾದರೂ ತಿಳಿಸಿದಿರಾ ?

ಸೋಮ—ಇಲ್ಲ, ನಾನು ತಿಳಿಸಲಿಲ್ಲ.

ನಾನು—ಚೆನ್ನಾಗಿ ಜ್ಞಾಪಕಕ್ಕೆ ತಂದುಕೊಳ್ಳಿರಿ. ಆ ದಿನ ಮತ್ತಾರ ನ್ನಾದರೂ ಸಂಧಿಸಿದ್ದಿರೋ ?

ಸೋಮ—ನಾನು ಎಷ್ಟೋ ತೆರನಾಗಿ ಆಲೋಚಿಸಿ ನೋಡಿದೆನು. ನಾನು ಆ ದಿನದ ಸಾಯಂಕಾಲ ಮನೆಗೆ ಊಟಕ್ಕೆ ಬಂದು ಹಿಂದಿರುಗಿ ಹೋಗುವಾಗ, ದಾರಿಯಲ್ಲಿ ಇಬ್ಬರು ಮೂವರನ್ನು ಕಂಡು ಮಾತನಾಡಿಸಿದೆನು. ನಾನು ಅವರ ಸಂಗಡ ವಿಶೇಷವಾಗಿ ಮಾತನಾಡಿದಂತೆ ಕಂಡು ಬರುವುದಿಲ್ಲ. ಗೋಪ್ಯದ ಈ ಸುದ್ದಿಯನ್ನು ಅವರಿಗೆ ನಾನೆಂದಿಗೂ ಹೇಳಿಲ್ಲ. ಏತಕೆಂದರೆ—ಗೋಪ್ಯವಾಗಿಟ್ಟಿರಬೇಕೆಂದು ಹೇಳಿದ್ದ ಸಂಗತಿಯನ್ನು ಬಹಿರಂಗ ಮಾಡುವುದು ನನಗೆಂದಿಗೂ ಅಭ್ಯಾಸವಿಲ್ಲ.

ನಾನು—ತಾವು ಊಟಮಾಡಿಕೊಂಡು ಕಾರ್ಯಸ್ಥಾನಕ್ಕೆ ಹೋದ ಮೇಲೆಯಾದರೂ, ತಮ್ಮನ್ನು ಹುಡುಕಿಕೊಂಡು ಆರಾದರೂ ಬಂದಿದ್ದರೇ ?

ಸೋಮ—ನಾನು ರಾತ್ರಿಯಲ್ಲಿ ಕಾರ್ಯಸ್ಥಾನಕ್ಕೆ ಹೋಗುವುದು ಆರಿಗೂ ಗೊತ್ತಿರಲಿಲ್ಲವಾದುದರಿಂದ, ಆರೂ ನನ್ನನ್ನು ಹುಡುಕಿಕೊಂಡು ಅಲ್ಲಿಗೆ ಬರಲಿಲ್ಲ.

ಬಳಿಕ ನಾನು ಬಲು ಹೊತ್ತು ಆವ ಪ್ರಶ್ನೆಯನ್ನೂ ಮಾಡದೆ ಆಲೋಚಿಸುತ್ತಾ ಕುಳಿತೆನು.

ಸೋಮಸುಂದರನು ನನ್ನ ಮನೋಭಾವವನ್ನು ನೋಡಿ ದಿಗಿಲು ಬಿದ್ದವನಾಗಿ, ಮುಖದಲ್ಲಿ ನಿರಾಶಭಾವವನ್ನು ತೋರ್ಪಡಿಸುತ್ತಾ ನನ್ನನ್ನು ಕುರಿತು ಇಂತೆಂದನು :—" ಜಯಶಂಕರ ಮಹಾಶಯ ! ತಮ್ಮಿಂದ ಈ ರಹಸ್ಯವು ಭೇದಿಸಲ್ಪಡಲಾದೀತೇ ? ತಮಗೆ ಧೈರ್ಯವಿದ್ದು ನನಗೆ ಭರವಸೆ ಕೊಡುವುದಾದರೆ, ಮೃತಪ್ರಾಯವಾದ ನನ್ನ ಈ ದೇಹದಲ್ಲಿ ಪ್ರಾಣಸಂಚಾರವಾಗುವುದು."

ನಾನು ಸೋಮನ ಮಾತನ್ನು ಕೇಳಿ ಇಂತೆಂದೆನು :—" ಇದು ಹೀಗೆಯೇ ಸರಿಯೆಂದು ಖಂಡಿತವಾಗಿಯೂ ಹೇಳುವುದು ಬಲು ಕಷ್ಟವು. ಘಟನಾವಳಿಯಾದರೋ ಅತಿ ರಹಸ್ಯದಿಂದ ತುಂಬಿಹೋಗಿದೆಯೆಂಬುದರಲ್ಲಿ ಏನೇನೂ ಸಂಶಯವಿಲ್ಲ. ನಾನೂ ಅದನ್ನು ಒಪ್ಪಿಕೊಳ್ಳುವೆನು. ನಾನು ಈಗಳಾದರೋ ಪ್ರಯತ್ನಮಾಡಿ ನೋಡುವೆನು. ಒಳಗಣ ಮರ್ಮವು ಕೊಂಚ ಮಟ್ಟಿಗಾದರೂ ಸಿಕ್ಕದೇ ಹೋದರೆ, ನಾನು ತಮಗೆ ಹೇಗೆ ಭರವಸೆಯನ್ನು ಕೊಡಲಿ ? ಆದರೆ ನನ್ನದೊಂದು ವಿಷಯವುಂಟು. ನಾನು ಲಲಿತಮೋಹನನಿಗೆ ಮಾತ ಕೊಟ್ಟು ಬಂದಿರುವೆನು. ನಾನು ಈ ವಿಷಯದಲ್ಲಿ ಸಂಪೂರ್ಣವಾಗಿ ಜಾಲಾಡದೆಯೇ ಹಿಂದಿರುಗಿ ಹೋಗತಕ್ಕವನಲ್ಲ. ಮರ್ಮವು ಗೊತ್ತಾಗಿ ಕಾರ್ಯವು ಅನುಕೂಲಿಸುವುದಾದರೆ, ನಿಮ್ಮ ಪುಣ್ಯೋದಯವೆಂದೇ ಹೇಳಬೇಕು. ಅದರಿಂದ ನನಗೂ ಕೀರ್ತಿಯುಂಟು."

ಸೋಮು—ಹಾಗಾದರೆ ನೀವು ಆವ ಆಧಾರದ ಮೇಲೆ ಈ ಕಾರ್ಯದಲ್ಲಿ ಕೈಹಚ್ಚುವಿರಿ?

ನಾನು—ನನಗೆ ಕೆಲವು ಆಧಾರವು ಸಿಕ್ಕಿರುವುದು. ನಾನು ಅದನ್ನು ಮೊದಲು ಪರೀಕ್ಷೆಗೀಡುಮಾಡದೆ ಮುಂದಣ ಪ್ರಯತ್ನವನ್ನು ಮಾಡುವುದಿಲ್ಲ. ನನ್ನ ಮನಸ್ಸಿಗೆ ತೃಪ್ತಿಯಾಗುವ ವರೆಗೂ ನಿಮಗೆ ನಾನು ಆವುದನ್ನೂ ತಿಳಿಸಲಾರೆನು.

ಸೋಮು—ಕಳ್ಳರಾರೆಂದು ತಾವು ನಿಶ್ಚಯಿಸಿಕೊಂಡಿರೋಣವಾಗಿದೆ?

ನಾನು—ಪ್ರಕೃತದಲ್ಲಿ ನಾನೇ ಕಳ್ಳನೆಂದು ನಿಶ್ಚಯಿಸಿಕೊಂಡಿರುವೆನು.

ಸೋಮು—ಹಾಗೆಂದರೇನು?

ನಾನು—ಅದರ ವಿಷಯವೇ ಹಾಗೆ. ನಾನು ಈಗ ತಮ್ಮಿಂದ ಅಪ್ಪಣೆಯನ್ನು ತೆಗೆದುಕೊಂಡು ಹೊರಡುವೆನು.

ಸೋಮು—ಮಹಾಶಯ! ನಿಮ್ಮಿಂದಲೇ ನನ್ನ ವಿಪತ್ತು ಪರಿಹಾರವಾಗಬೇಕೆಂದು ನಾನು ನಂಬಿಕೊಂಡಿರುವೆನು. ತಾವು ಹೇಗಾದರೂ ಮಾಡಿ ನನ್ನನ್ನು ಉದ್ಧಾರಮಾಡಬೇಕು.

ಹೀಗೆ ಹೇಳುತ್ತಿರುವಾಗ ಸೋಮುಸುಂದರನಿಗೆ ಮತ್ತೊಂದು ಸಂಗತಿಯು ಜ್ಞಾಪಕಕ್ಕೆ ಬಂದು, ತನ್ನ ತಲೆದಿಂಬಿನ ಕೆಳಗಡೆಯಿಂದ ಒಂದು ಪತ್ರವನ್ನು ಹೊರಗೆ ತೆಗೆದು ನನ್ನನ್ನು ಕುರಿತು—ಜಯಶಂಕರ ಮಹಾಶಯ! ತಮಗೆ ಮತ್ತೊಂದು ಸಂಗತಿಯನ್ನು ತಿಳಿಸುವುದಕ್ಕೆ ಮರೆತೇ ಹೋಗಿದ್ದಿತು. ನಮ್ಮ ಮಾವನವರು ನನಗೊಂದು ಪತ್ರವನ್ನು ಬರೆದಿರುವರು. ಅದನ್ನು ತಾವು ನೋಡಬೇಕು, ಎಂದನು.

ನಾನು ಅದನ್ನು ಸೋಮುಸುಂದರನಿಂದ ತೆಗೆದುಕೊಂಡು ಓದ ತೊಡಗಿದೆನು. ಅದು ಈ ರೀತಿಯಾಗಿದ್ದಿತು:—

"ಸೋಮು! ನಿನ್ನ ಅಜಾಗರೂಕತೆಯಿಂದ ನನಗೆ ಉಂಟಾಗಿರತಕ್ಕ ಅನಿಷ್ಟವಿಷ್ಟೆಂದು ಹೇಳಲಸದಳವು. ನೀನು ನಿರ್ದೋಷಿಯೆಂಬುದರಲ್ಲಿ ನನಗೆ ಸಂಪೂರ್ಣವಾಗಿ ನಂಬುಗೆಯು ಇದ್ದೇ ಇರುವುದು. ಆದರೆ ಕಳುವಾದ ಆ ಪತ್ರವು ಸಿಕ್ಕದೆಯೇ ಹೋದರೆ, ನಿನ್ನಲ್ಲಿ ನನಗೆ ಅಪರಾಗವುಂಟಾಗುವುದರಲ್ಲಿ ಆವ ಸಂಶಯವೂ ಇರಲಾರದು. ನನ್ನ ನಿನ್ನ ಪುರೋಭಿವೃದ್ಧಿಯು ಆ ಪತ್ರದಲ್ಲಿರುವುದು. ಈಗಳೇ ಆ ಪತ್ರಗಳು ಸಿಕ್ಕುವುದಾದರೂ, ನಮ್ಮಗಳ ಗೌರವಕ್ಕೆ ಚ್ಯುತಿಯುಂ

ಟಾಗಲಾರದೆಂದು ತಿಳಿಯಲಾಗದು. ಆ ಪತ್ರಗಳನ್ನೋದಿದ ಆವನೇ ಆಗಲಿ, ಅನಾಯಾಸವಾಗಿ ಅದರಲ್ಲಿ ಕಂಡ ವಸ್ತುವನ್ನು ನಿರ್ಮಾಣಮಾಡಲು ತಕ್ಕ ಕ್ರಮವನ್ನು ತಿಳಿದುಕೊಂಡು, ಆ ಕೂಡಲೆಯೇ ವ್ಯಾಪಾರಕ್ಕೆ ಮೊದಲು ಮಾಡಿ ಬಿಡುವನು. ಅದುಕಾರಣ ಕಳೆದು ಹೋದ ಪತ್ರಗಳು ಈಗ ಸಿಕ್ಕಿದರೂ ಒಂದೇ, ಸಿಕ್ಕದಿದ್ದರೂ ಒಂದೇ. ನಿನ್ನ ಕರ್ತವ್ಯವೇನೆಂದರೆ—ಮೊದಲಿನಿಂದಲೂ ನಿನ್ನಲ್ಲಿ ನನಗಿದ್ದ ನಂಬುಗೆಯನ್ನು ಈಗಲೂ ಕೆಡಿಸದೆಯೇ ಇರುವುದಕ್ಕೆ ಏನ ಮಾಡ ಬೇಕೋ ಅದನ್ನು ನೀನು ಆಲೋಚಿಸಿ ಮಾಡಿಯೇ ತೀರಬೇಕು. ನಮ್ಮ ಪತ್ರ ಗಳು ಮೂಢನ ಕೈಗೆ ಸಿಕ್ಕುವುದಾದರೆ, ಅವನಿಗೆ ಪ್ರಯೋಜನವಿಲ್ಲ, ನನಗೆ ಮಟ್ಟಿಗೆ ಸರ್ವನಾಶವಾಗಿ ಹೋಗುವುದು. ಒಂದು ವೇಳೆ ಹೀಗೆಯೇ ಆಗಿರುವು ದಾದರೆ, ಪತ್ರಗಳು ಈಗ ಸಿಕ್ಕಿದರೂ ನಮಗೆ ಪ್ರಯೋಜನವುಂಟು. ಆ ಪತ್ರ ಗಳು ದಡ್ಡನ ಕೈಗೆ ಸಿಕ್ಕಿರುವುದೆಂದು ಆರು ತಾನೇ ಊಹಿಸುವುದಕ್ಕಾದೀತು? ಕೆಲಸವೇನೋ ನಡೆದು ಹೋಗಿರುವುದು. ಹಣೆಯಲ್ಲಿ ಬರೆದಂತಾಗಲಿ."

"ಇತಿ, ಮೋಸಹೋದ ರಮಾರಮಣ."

ಈ ರೀತಿಯಾಗಿ ಬರೆದಿದ್ದ ಪತ್ರವನ್ನು ನಾನು ಓದಿ ಮುಗಿಸಿದ ಮೇಲೆ, ಸೋಮಸುಂದರನು ಇಂತೆಂದನು :—"ಮಹಾಶಯ! ಈ ಪತ್ರವನ್ನು ನೋಡಿ ತಾವು ಏನ ಅಭಿಪ್ರಾಯ ಪಡೋಣವಾಗಿದೆ? ನಾನು ಮನಃಪೂರ್ವಕವಾಗಿ ಆತನ ಸರ್ವನಾಶಕ್ಕೆ ಕಾರಣವೆಂದು ಆತನು ತಿಳಿದಿರುವಂತೆ ಕಂಡು ಬರುವುದಿಲ್ಲ. ನನ್ನ ಕೇವಲವಾದ ಅಜಾಗರೂಕತೆಯಿಂದ ಈ ಸರ್ವನಾಶವುಂಟಾಗಿರುವುದೆಂದು ಆತನು ಬಲ್ಲವನಾಗಿರುವನು. ಮಹಾಶಯ! ತಮ್ಮಿಂದ ಆ ಪತ್ರಗಳು ಮತ್ತೆ ಸಿಕ್ಕುವು ದಾದರೆ, ನಾವಿಬ್ಬರೂ ಬದುಕುವೆವು. ಅಲ್ಲದೆಯೂ ಮುಂದಕ್ಕೆ ನಮ್ಮಿಬ್ಬರಿಗೂ ವೃದ್ಧಿಯುಂಟು."

ನಾನು ಸೋಮಸುಂದರನ ಮಾತನ್ನು ಕೇಳಿ, 'ದೇವರಿದ್ದಾನೆ' ಎಂದು ಹೇಳಿ ಲಲಿತಮೋಹನನನ್ನೂ ಜತೆಯಲ್ಲಿಯೇ ಕರೆದುಕೊಂಡು ಹೊರಗೆ ಹೊರಟು ಬಂದು ಬಿಟ್ಟೆನು.

---

## ೪

### (ಜಯಶಂಕರನ ಹೇಳಿಕೆ)

ನಾನು ಅದೇ ದಿನವೇ ಗ್ರಾಮರಕ್ಷಾಧಿಕಾರಿಯನ್ನೂ ಕೆಲವು ಮಂದಿ ಯಾಮಿಕರನ್ನೂ ನೋಡಿದೆನು. ಅವರಿಂದ ಎಷ್ಟನ್ನು ತಿಳಿಯಬೇಕೋ ಅಷ್ಟನ್ನು

ತಿಳಿದುಕೊಂಡು, ಧನ ಕುಬೇರ ಶ್ರೀರಮಾರಮಣ ಮಹಾಶಯನನ್ನು ನೋಡುವುದಕ್ಕಾಗಿ ಆತನ ಮನೆಗೆ ಹೋದೆನು.

ಅಲ್ಲಿ ನಮ್ಮಿಬ್ಬರಿಗೂ ಅನ್ಯೋನ್ಯ ಪರಿಚಯವಾಗಿ ಯೋಗಕ್ಷೇಮದ ಮಾತುಗಳು ನಡೆದ ಬಳಿಕ, ನಾನು ರಮಾರಮಣನನ್ನು ಕುರಿತು—ಸ್ವಾಮಿ! ಬಲು ಬೆಲೆಬಾಳುವ ಪತ್ರಗಳು ಕಳುವಾಗಿರುವವಷ್ಟೇ. ಒಬ್ಬ ಕಾರ್ಯಪರನಾದ ಬುದ್ಧಿಮಂತನ ಕೈಗೆ ಆ ಪತ್ರಗಳು ಸಿಕ್ಕದೇ ಇದ್ದಲ್ಲಿ, ತಮಗೇನೂ ನಷ್ಟವೆಂಬುದಿಲ್ಲವಷ್ಟೇ? ಎಂದು ಕೇಳಿದುದಕ್ಕೆ, ಆತನು ಹೇಳಿದುದೇನೆಂದರೆ—"ಅಂತಹ ನಷ್ಟವೇನೂ ಕಂಡುಬರುವುದಿಲ್ಲ. ಕೆಲಸಗಾರನಲ್ಲದವನಿಗೆ ಸಿಕ್ಕಿದ್ದರೆ, ಈ ವಿಷಯಗಳೆಲ್ಲವೂ ಬೇಗನೆ ಆತನ ತಲೆಗೇ ಹತ್ತುವುದಿಲ್ಲ. ಬುದ್ಧಿಮಂತನ ಕೈಗೇನಾದರೂ ಸಿಕ್ಕಿದ್ದರೆ, ಆತನು ನಿಮಿಷಮಾತ್ರದಲ್ಲಿ ಹಣದ ಸಂಪಾದನೆಗೆ ತಕ್ಕ ಪ್ರಯತ್ನವನ್ನು ಮಾಡಿಯೇ ಬಿಡುವನು. ಅದರಲ್ಲಿ ಕೊಂಚವೂ ಸಂಶಯವಿಲ್ಲ. ಹೀಗಾಗಿದ್ದರೆ ಮಟ್ಟಿಗೆ ನಾನು ಮುಳುಗಿಯೇ ಹೋದೆನು."

ನಾನು—ಬುದ್ಧಿಮಂತನಾಗಿದ್ದಿದ್ದರೆ, ಇಷ್ಟು ದಿವಸಗಳೊಳಗಾಗಿಯೇ ಏನಾದರೊಂದು ಕೆಲಸವು ನಡೆದೇ ಹೋಗಿರಬೇಕು. ಹಾಗಾಗಿದ್ದರೆ, ಅದು ತಮಗೆ ತಿಳಿಯುವ ಸಂಭವವಿರುತ್ತಿದ್ದಿತೇ ಹೇಗೆ?

ರಮಾ—ನನಗೆ ಖಂಡಿತವಾಗಿಯೂ ಗೊತ್ತಾಗಿಯೇ ಆಗುತ್ತಿದ್ದಿತು. ಏಕೆಂದರೆ—ಆ ವಿಚಾರವು ನಮ್ಮ ಈ ಭರತಖಂಡದಲ್ಲಿ ಇಂದಿನ ವರೆಗೂ ಆವ ತಲೆಯಲ್ಲಿಯೂ ಹೊಳದೇ ಇಲ್ಲ.

ನಾನು ರಮಾರಮಣನೊಡನೆ ಈ ರೀತಿಯಲ್ಲಿಯೇ ಇನ್ನೂ ಕೆಲವು ಮಾತುಗಳನ್ನಾಡಿ, ಆತನ ಅಪ್ಪಣೆಯನ್ನು ತೆಗೆದುಕೊಂಡು ಹೊರಟು ಹೋಗಿ, ಆ ದಿನವೆಲ್ಲಾ ಬಗೆಬಗೆಯ ವೇಷಗಳನ್ನು ಧಾರಣಮಾಡಿ ಅನೇಕ ಜನರೊಡನೆ ಮಾತನಾಡಿಕೊಂಡು ಬಂದೆನು.

ಮರುದಿನ ನಾನು ಲಲಿತಮೋಹನನನ್ನು ಜತೆಯಲ್ಲಿಯೇ ಕರೆದುಕೊಂಡು ಸೋಮಸುಂದರನ ಬಳಿಗೆ ಬಂದೆನು. ಆತನು ನಮ್ಮನ್ನು ನೋಡಿದ ಕೂಡಲೆ, 'ನಿನ್ನೆಯ ದಿನದ ರಾತ್ರಿಯಲ್ಲಿ ಒಂದು ಭಯಂಕರವಾದ ಸಂಗತಿಯು ನಡೆಯಿತು,' ಎಂದು ತಿಳಿಸಿದನು.

ನಾನು—(ಅಚ್ಚರಿಯಿಂದ) ಅದೇನು ಸಂಗತಿ?

ಸೋಮ—ರಾತ್ರಿಯಲ್ಲಿ ನಡೆದ ವಿಷಯವನ್ನು ಹಗಲಿನಲ್ಲಿ ಜ್ಞಾಪಿಸಿ ಕೊಂಡರೇನೇ ಮೈಯೆಲ್ಲಾ ನಡುಗುವುದು. ಅದನ್ನು ನಾನು ಆರ ಮುಂದೆಯೂ ಹೇಳಲಿಲ್ಲ. ನಿನ್ನೆಯ ಸಂಗತಿಯನ್ನು ನೋಡಿದರೆ, ನನಗೇನೋ ಮಹಾ ವಿಪತ್ತು ಒದಗಿಬರುತ್ತಿರುವುದೆಂದು ಬೋಧೆಯಾಗುವುದು. ನನ್ನ ಗೌರವ, ಸಂಪತ್ತು ಹಾಳಾಗಿ ಹೋಗುವ ಮಾತು ಹಾಗಿರಲಿ; ನನ್ನ ಪ್ರಾಣಕ್ಕೆ ಸಂಚುಕಾರ ಕೊಟ್ಟರು ವಂತೆ ಕಾಣುವುದು.

ನಾನು—ಅದೇನು? ಬೇಗ ತಿಳಿಸೋಣವಾಗಲಿ.

ಸೋಮ—ನಾನು ಹೇಳುವುದನ್ನು ಕೇಳಿದರೆ, ಮೊದಮೊದಲು ಆರಿಗೂ ವಿಶ್ವಾಸವೇ ಹುಟ್ಟುವುದಿಲ್ಲ. ನನಗೆ ಶತ್ರುಗಳಾರೂ ಇಲ್ಲದಿರುವುದಕ್ಕೆ ಇದೇ ಮುಖ್ಯವಾದ ಕಾರಣವು. ನಿನ್ನೆಯ ರಾತ್ರಿಯಲ್ಲಿ ನಡೆದುದನ್ನು ನೋಡಿದರೆ, ಆ ಕಾರಣವೂ ಬಲಃ ಹೊತ್ತು ನಿಲ್ಲಲಾರದುದಾಗಿ ತೋರುವುದು.

ನಾನು—ಅದೇನು ಹೇಳಬಾರದೇ?

ಸೋಮ—ಇಷ್ಟು ದಿನಕ್ಕೆ ನಿನ್ನೆಯ ರಾತ್ರಿಯೇ ನನಗೆ ನಿದ್ರೆಯೆಂಬುದು ಬಂದಿತು. ಇದರ ಕಾರಣವು ತಮಗೆ ಗೊತ್ತೇ ಇರುವುದು. ಕಾರ್ಯಭಾರವನ್ನು ಮತ್ತೊಬ್ಬನಿಗೆ ವಹಿಸಿ ನಿರಾತಂಕನಾದ ಮನುಷ್ಯನಿಗೆ ನಿದ್ದೆ ಬಾರದೇ ಏನು? ನನಗೂ ಆನಂದವಾಗಿ ನಿದ್ದೆ ಹತ್ತಿತು. ನಿನ್ನೆಯ ವರೆಗೂ ರಾತ್ರಿಯ ಕಾಲದಲ್ಲಿ ಸರ್ವಮಂಗಳೆ ಮತ್ತೊಬ್ಬ ದಾಸಿ ಇವರಿಬ್ಬರೂ ನನ್ನನ್ನು ಶಿಶ್ರೂಷೆ ಮಾಡಿ ಕೊಂಡಿರುತಿದ್ದರು.

ನಿನ್ನೆ ನನ್ನ ಕಣ್ಣಿಗೆ ನಿದ್ದೆ ಹತ್ತಿದುದನ್ನು ನೋಡಿ, ಅವರಿಬ್ಬರೂ ಅವರವರ ಸ್ಥಾನದಲ್ಲಿ ಹೋಗಿ ಮಲಗಿಕೊಂಡರು. ನನ್ನ ಕೋಣೆಯಲ್ಲಿ ಮಟ್ಟಿಗೆ ಒಂದು ಸಣ್ಣ ದೀಪವು ಮಿಣಮಿಣನೆ ಮಿನುಗುತ್ತಿದ್ದಿತು. ರಾತ್ರಿಯಲ್ಲಿ ಪ್ರಾಯಿಕವಾಗಿ ಎರಡು ಗಂಟೆಯಾಗಿರಬಹುದು. ಆಗ ಹಿತವಲ್ಲದ ಅದೊಂದು ದನಿಯು ತಟ್ಟನೆ ನನಗೆ ಕೇಳಿ ಬರಲು, ನಾನು ಬೆಚ್ಚಿ ಬೆದರಿ ಹೋದೆನು. 'ಕುಟ್ ಕುಟ್ ಕುಟುಕು ಕುಟ್ ಕುಟ್, ಕುಟ್ ಕುಟ್ ಕುಟುಕು ಕುಟ್ ಕುಟ್' ಎಂಬುದಾಗಿ ಶಬ್ದವು ಹೊರಟಿತು. ಇದು ಇಲಿಯ ಶಬ್ದವಿರಬಹುದೆಂದು ಮನಸ್ಸಿಗೆ ಧೈರ್ಯವನ್ನು ತೆಗೆದುಕೊಂಡು, ನಾನು ಮುಖದ ತುಂಬಾ ಹೊದೆದುಕೊಂಡು ಮಲಗಿದೆನು. ಕ್ರಮಕ್ರಮವಾಗಿ ಆ ಶಬ್ದವು ಹೆಚ್ಚುತ್ತಾ ಬಂದಿತು. ಕೊನೆಗೆ ಆ ಶಬ್ದವು 'ಥಪ್ ಥಪ್ ಥಪಾ ಥಪ್' ಎಂದು ಕಿಟಕಿಯ ಕಡೆಯಿಂದ ಕೇಳಿಬರಲಾರಂಭವಾಯಿತು. ಆಗ ನನಗೆ ಸಂಶಯಕ್ಕಿಟ್ಟಿತು. ಆ ಕೂಡಲೆ ನಾನು ಹಾಸುಗೆಯ

ಮೇಲೆ ಎದ್ದು ಕುಳಿತೆನು. ಅನಂತರದಲ್ಲಿ ಶಬ್ದಕ್ಕೆ ಕಾರಣವು ಗೊತ್ತಾಗುತ್ತಾ ಬಂದಿತು. ಆರೋ ಕಿಟಕಿಯ ಕಬ್ಬಿಣದ ಸಲಾಕೆಯನ್ನು ಸಡಲಿಸುವ ಪ್ರಯತ್ನ ದಲ್ಲಿರುವಂತೆ ತಿಳಿಯಿತು.

ಇಷ್ಟು ಹೇಳಿ ಸೋಮಸುಂದರನು ಕೊಂಚ ಹೊತ್ತು ವಿಶ್ರಾಂತಿಯನ್ನು ತೆಗೆದುಕೊಂಡು, ಮತ್ತೆ ಹೇಳತೊಡಗಿದನು :—

"ನಾನು ಹಾಸುಗೆಯ ಮೇಲೆ ಎದ್ದು ಕುಳಿತುಕೊಂಡ ಕೂಡಲೆ, ಆ ಶಬ್ದವು ಅಡಗಿಹೋಯಿತು. ಮನೆಯವರು ಮಲಗಿರುವರೋ, ಎಚ್ಚರವಾಗಿರುವರೋ ಎಂಬುದನ್ನು ಅರಿವುದಕ್ಕಾಗಿ, ಕಳ್ಳರು ಬಿಟ್ಟು ಬಿಟ್ಟು ಕೆಲಸಮಾಡುವರು. ಕೊಂಚ ಹೊತ್ತಾದ ಕೂಡಲೆ, ಮತ್ತೆ ಅದೇ ಶಬ್ದವು ಕೇಳಿಬಂದಿತು. ಆ ಶಬ್ದವು ಕೇಳಿಬಂದ ಕೆಲವು ನಿಮಿಷಗಳೊಳಗಾಗಿಯೇ, ಕಿಟಕಿಯ ಬಾಗಿಲು ಕೊಂಚ ತೆರೆ ಯಲ್ಪಟ್ಟಿತು. ಇನ್ನು ನಾನು ತಡೆಯಲಾರದೇ ಹೋದೆನು. ಬಳಿಕ ನಾನು ಧೈರ್ಯವನ್ನು ತೆಗೆದುಕೊಂಡು ಓಡಿಬಂದು ಕಿಟಕಿಯ ಬಾಗಿಲನ್ನು ದಢಾಲ್ ಎಂದು ತೆಗೆದುಬಿಟ್ಟೆನು. ಕಿಟಕಿಯ ಹತ್ತಿರದಲ್ಲಿ ನಿಂತಿದ್ದ ಒಬ್ಬ ಮನುಷ್ಯನು ಆ ಕ್ಷಣವೇ ಪಲಾಯನ ಮಾಡಿದನು. ಆತನಾರಿರಬಹುದೆಂದು ನಾನು ಕಣ್ಣಿನಲ್ಲಿ ಕಣ್ಣನ್ನಿಟ್ಟು ನೋಡಲಾಗಿ, ಆತನು ತಲೆಯಿಂದ ಕಾಲಿನ ವರೆಗೂ ಕರಿಯ ಉಡುಪನ್ನು ಧರಿಸಿದ್ದವನಂತೆ ಕಾಣಿಸಿಕೊಂಡನು. ಆದುದರಿಂದ ಆತನಾರೆಂ ಬುದು ನನಗೆ ತಿಳಿಯಲು ಅವಕಾಶವಾಗಲಿಲ್ಲ. ಆತನನ್ನು ಹಿಂಬಾಲಿಸಿ ಹೋಗೋಣವೆಂದರೆ, ನನಗೆ ಶಕ್ತಿಸಾಲದುದಾಗಿದ್ದಿತು. ಒಂದು ವೇಳೆ ನಾನು ಹೋಗಿದ್ದರೂ, ನನಗೆ ದೊಣ್ಣೆಯಪೆಟ್ಟೋ, ಮಚ್ಚಿನ ಗಾಯವೋ ಆಗಿಬಿಡು ತ್ತಿದ್ದಿತು. ಆತನು ಆರೆಂಬುದು ಗೊತ್ತಾಗದಿದ್ದರೂ, ಆತನ ಕೈಯಲ್ಲಿ ಅದೊಂ ದಾಯುಧವು ಇದ್ದಂತೆ ತೋರಿಬಂದಿತು. ಮಸಕುಮಸಕಾದ ಆ ಬೆಳದಿಂಗಳಲ್ಲಿ ನನಗೆ ಮತ್ತೇನೂ ಕಂಡುಬರಲಿಲ್ಲ."

ನಾನು—ಆ ಮೇಲೆ ?

ಸೋಮ—ಆ ಮೇಲೆ ನಾನು ಕಿಟ್ಟೆಂದು ಅರಚಿಕೊಂಡೆನು. ಕೂಡ ಲೆಯೇ ಮನೆಯ ಜನರೆಲ್ಲರೂ ಬೆಚ್ಚಿ ಬೆದರಿ ಬೇಗನಾಗಿ ಎದ್ದು ಬಂದರು. ಇಬ್ಬರು ಮೂವರು ಕೈಯಲ್ಲಿ ದೊಣ್ಣೆಗಳನ್ನು ಹಿಡಿದುಕೊಂಡು ಹಿತ್ತಲ ಕಡೆಯೋಡಿದರು. ಕಳ್ಳನು ಮಟ್ಟಿಗೆ ಸಿಕ್ಕಲೇ ಇಲ್ಲ.

ನಾನು—ಈ ಸಂಗತಿಯು ಅಕ್ಕಪಕ್ಕದವರಿಗೇನಾದರೂ ಗೊತ್ತಾಯಿತೇ?

ಸೋಮ—ಇಲ್ಲ; ಈ ವಿಷಯವು ಅಷ್ಟೇನೂ ಬಹಿರಂಗವಾಗಲಿಲ್ಲ, ಬಹಿರಂಗ ಪಡಿಸಲು ನನಗೂ ಅಷ್ಟೇನೂ ಇಷ್ಟವಿರಲಿಲ್ಲ. ರಾತ್ರಿಯಲ್ಲಿ ನಡೆದು ದೆಲ್ಲವೂ ಗೋಪ್ಯವಾಗಿರಲೆಂದು ಮನೆಯವರಿಗೆ ತಿಳಿಸಿದೆನು. ಅದು ಕಾರಣವೇ ಎಲ್ಲರೂ ಸುಮ್ಮನಾಗಿಬಿಟ್ಟರು. ನಿಮಗೆ ಆವ ವಿಷಯವನ್ನೂ ಮೊದಲು ತಿಳಿಸದೆಯೇ, ಆವ ಕೆಲಸವನ್ನು ಮಾಡಕೂಡದೆಂದು ನಾನು ನಿಶ್ಚಯಮಾಡಿಕೊಂಡಿದ್ದೆನು.

ಲಲಿತ—ಜಯ! ನೋಡಿದೆಯಾ, ವಿಪತ್ತೆಂಬುದು ಹೇಗೆ ಬರುವುದು? ಪಾಪಾಚಾರಿಗಳು ಮೇಲಿಂದ ಮೇಲೆ ಕಿಡುಕನ್ನು ಮಾಡುವುದಾದರೆ, ಆರ ಮನಸ್ಸಿಗೆ ತಾನೇ ಶಾಂತಿಯುಂಟಾದೀತು? ಮನುಷ್ಯನಾದವನಿಗೆ ಅಡಿಗಡಿಗೂ ಈತಿ ಬಾಧೆಗಳು ಇದ್ದೇ ಇರುವುವು. ಇವುಗಳಿಂದ ಪಾರಾಗುವುದು ಆರಿಂದಲೂ ಸಾಧ್ಯವಲ್ಲವೆಂದು ತೋರುವುದು.

ನಾನು—ಸೋಮ ಮಹಾಶಯ! ಈ ಕೋಣೆಯಲ್ಲಿಯೇ ಕುಳಿತು ಕುಳಿತು ಬೇಜಾರಾಗುವುದಿಲ್ಲವೇ? ಕೊಂಚ ಹೊತ್ತು ಒಳ್ಳೆಯ ಗಾಳಿಯನ್ನು ಸೇವಿಸುವುದಕ್ಕಾಗಿ ಮನೆಯ ಅಂಗಳಕ್ಕೆ ಹೋಗೋಣ. ಹೊರಗೆ ಸಂಚಾರ ಮಾಡಲು ಶರೀರದಲ್ಲಿ ತಕ್ಕ ಮಟ್ಟಿಗೆ ಬಲವಿದೆಯಷ್ಟೇ?

ಸೋಮ—ಅಷ್ಟಿಲ್ಲದೇ ಏನು! ಹೊರಗೆ ಹೋಗಿ ತಿರುಗಾಡಿಕೊಂಡು ಬರಲು ನನಗೂ ಇಷ್ಟ.

ಇಷ್ಟು ಮಾತು ನಡೆದ ಮೇಲೆ ನಾವು ಮೂವರೂ ಹಿತ್ತಲ ಕಡೆಗೆ ಹೊರಟೆವು. ಹಿತ್ತಲಿನಲ್ಲಿ ನಾವು ನಿಶಾಕಾಂತರಾಯನನ್ನು ಇದಿರುಗೊಂಡೆವು. ನಾವೆಲ್ಲರೂ ಸೇರಿಕೊಂಡು ವಿನೋದದಿಂದ ಸಂಚರಿಸಲಾರಂಭಿಸಿದೆವು. ಮಾತನಾಡುತ್ತಾ ಮಾತನಾಡುತ್ತಾ, ಸೋಮಸುಂದರನು ಆವ ಕಿಟಕಿಯ ವಿಷಯವಾಗಿ ಹೇಳಿದ್ದನೋ ಅದೇ ಕಿಟಕಿಯ ಹತ್ತಿರಕ್ಕೆ ನಾವೆಲ್ಲರೂ ಬಂದೆವು. ಕಿಟಕಿಯ ಕೆಳಗೆ ನೆಲದ ಮೇಲೆ ಕಾಲಿನ ಗುರುತುಗಳು ಕಾಣಬಂದುವು. ಆರಿಗೂ ಸುಳು ಗೊತ್ತಾಗದಂತೆ ಚೆನ್ನಾಗಿ ಆ ಕಾಲುಗಳ ಗುರುತಿನ ಪರಿಚಯವನ್ನು ಮಾಡಿಕೊಂಡೆನು.

---

## ೫

## (ಲಲಿತಮೋಹನನ ಹೇಳಿಕೆ)

ಜಯಶಂಕರನು ಕೊಂಚ ಹೊತ್ತು ಕಾಲಿನ ಗುರುತನ್ನು ಪರೀಕ್ಷಿಸುತ್ತಿದ್ದು, ಆ ಮೇಲೆ ಎಲ್ಲರೊಡನೆಯೂ ಸೇರಿಕೊಂಡು ಸಂಚಾರ ಹೊರಟನು. ಗೊತ್ತಾದು

ದೇಸೆಂದು ಇತರರು ಕೇಳಿದುದಕ್ಕೆ 'ಏನೂ ಪ್ರಯೋಜನವಾಗಲಿಲ್ಲ. ಈ ಮನೆಯ ಮೇಲೆ ಕಳ್ಳನ ದೃಷ್ಟಿ ಬೀಳಲು ಕಾರಣವೇನಿರಬಹುದು ಎಂಬುದನ್ನು ಪರೀಕ್ಷಿಸುತ್ತಿದ್ದೆನು' ಎಂದು ಹೇಳಿದನು. ಬಳಿಕ ಎಲ್ಲರೂ ಮನೆಯನ್ನು ಪ್ರದಕ್ಷಿಣೆ ಮಾಡಲಾರಂಭಿಸಿದರು.

ನಿಶಾಕಾಂತನು ಜಯಶಂಕರನ ಮಾತಿಗುತ್ತರವಾಗಿ ಹೇಳಿದುದೇನೆಂದರೆ— "ಮಹಾಶಯ! ಈ ಮನೆಯ ಮೇಲೆ ಕಳ್ಳನ ದೃಷ್ಟಿ ಬೀಳಲು ಕಾರಣವುಂಟು. ಈ ಮನೆಯಾದರೋ ರಾಜಬೀದಿಗೆ ಸೇರಿದ ಹಾಗಿಲ್ಲ; ಹಾಗೂ ಈ ಮನೆಯು ಮತ್ತಾರ ಮನೆಗೂ ಸಂಬಂಧಿಸಿಕೊಂಡಿಲ್ಲ. ಅಲ್ಲದೆಯೂ ಮನೆಯ ಸುತ್ತಮುತ್ತಲೂ ಗುಂಪುಗುಂಪಾಗಿ ಬೆಳೆದ ಮರಗಳಿವೆ. ಇವೆಲ್ಲವೂ ಕಳ್ಳರಿಗೆ ಸಹಕಾರಿಗಳು.

ಜಯ—ಇದ್ದರೂ ಇರಬಹುದು. ಈ ಹಿತ್ತಲ ಕಡೆ ಬಾಗಿಲು ಇರುವುದಷ್ಟೆ. ಇದನ್ನು ಆವಾಗಲಾದರೂ ತೆಗೆಯುವುದುಂಟೋ?

ನಿಶಾ—ಹಗಲ ವೇಳೆಯಲ್ಲಿ ತೆಗೆಯುವುದುಂಟು. ರಾತ್ರಿಯ ವೇಳೆಯಲ್ಲಿ ರುದ್ಧವಾಗಿರುವುದು. ಅಕ್ಕಪಕ್ಕದ ಹೆಂಗುಸರು ಈ ಬಾಗಿಲಿನಿಂದಲೇ ನಮ್ಮ ಮನೆಗೆ ಬರುವರು. ಇಲ್ಲಿಂದಲೇ ನೀರ ಸೇದಿಕೊಂಡು ಹೋಗುವರು. ಇಲ್ಲಿಯೇ ಬಟ್ಟೆಬರೆಗಳನ್ನು ಒಗೆದು ಒಣಗಿಸುವರು. ಆದುದರಿಂದ ಹಗಲ ಹೊತ್ತಿನಲ್ಲಿ ಬಾಗಿಲನ್ನು ತೆರದಿರಬೇಕಾಗಿರುವುದು. ರಾತ್ರಿಯಲ್ಲಿ ಇದರ ಆವಶ್ಯಕತೆ ಇಲ್ಲದಿರುವುದರಿಂದ ರುದ್ಧವಾಗಿರುವುದು.

ಜಯ—ಇದರ ಬೀಗದ ಕೈ ಆರಲ್ಲಿರುವುದು?

ನಿಶಾ—ಮನೆಯಲ್ಲಿ.

ಜಯ—ಆರಾದರೂ ಕಳ್ಳರು ಹಿತ್ತಲಿನಲ್ಲಿ ಪ್ರವೇಶಮಾಡಿದರೆ, ಅವರು ತಪ್ಪಿಸಿಕೊಳ್ಳುವುದಕ್ಕೆ ಬೇರೆಯ ಉಪಾಯವೇ ಇಲ್ಲವೆಂದು ತೋರುವುದು.

ನಿಶಾ—ಇಲ್ಲದೇ ಏನು? ಈ ಮನೆಯ ಪಶ್ಚಿಮ ದಿಕ್ಕಿನಲ್ಲಿ ಪ್ರಾಚೀರದ ಗೋಡೆಗೆ ಸೇರಿದ ಹಾಗೆ ಒಂದು ಮಾವಿನ ಮರವಿರುವುದು. ಆ ಮರದ ಕೊಂಬೆಯ ಆಧಾರದ ಮೇಲೆ, ಕಳ್ಳನು ಸುಲಭವಾಗಿ ತಪ್ಪಿಸಿಕೊಂಡು ಹೊರಗೆ ಹೊರಟು ಹೋಗಬಹುದು. ಇದು ಹೊರತಾಗಿ ಕಳ್ಳನಾದವನು ಮತ್ತೊಂದು ಸ್ಥಲದಿಂದ ತಪ್ಪಿಸಿಕೊಂಡು ಹೋಗಲು ಸಾಧ್ಯವೇ ಇಲ್ಲ.

ಈ ರೀತಿಯಲ್ಲಿ ಬಗೆಬಗೆಯ ಮಾತುಕತೆಗಳು ನಡೆದ ಮೇಲೆ, ನಾವು ನಾಲ್ವರೂ ಮನೆಯೊಳಗೆ ಪ್ರವೇಶಮಾಡಿದೆವು. ಕಳ್ಳನ ವಿಷಯದಲ್ಲಿ ಇತ್ಯರ್ಥವಾದುದೇನೆಂದರೆ:—"ಆವನೋ ಒಬ್ಬ ಕಳ್ಳನು ಗೋಡೆಯನ್ನು ದಾಟಿ ಬಂದು ಕಿಟಕಿಯ ಮೂಲಕವಾಗಿ ಮನೆಯೊಳಗೆ ನುಗ್ಗಬೇಕೆಂದು ಯತ್ನಮಾಡಿದನು. ಅದು ಫಲಿಸಲಿಲ್ಲವಾದುದರಿಂದ, ಬಂದ ದಾರಿಗೆ ಸುಂಕವಿಲ್ಲವೆಂದು, ಆತನು ಹಿಂದಿರುಗಿ ಹೊರಟು ಹೋದನು."

ಹೀಗೆ ನಿಶ್ಚಯವಾದ ಕೂಡಲೆ, ನಿಶಾಕಾಂತನು ನನ್ನನ್ನು ಕುರಿತು—ಮಹಾಶಯ! ಈ ದಿನವೇ ನಾನು ಆ ಮಾವಿನ ಮರದ ಕೊಂಬೆಯನ್ನು ಕತ್ತರಿಸಿಬಿಡುವೆನು. ಇಲ್ಲದಿದ್ದರೆ ಅದೇ ಕಳ್ಳನು ಈ ರಾತ್ರಿಯೂ ಅದೇ ಮಾರ್ಗವಾಗಿಯೇ ಬಂದು ಮತ್ತೆ ಹಾವಳಿಯನ್ನು ಮಾಡಬಹುದು. 'ಗುರುತುಕಂಡ ಕಳ್ಳ, ಪ್ರಾಣದೊರಸೆ ಬಿಡ' ಎಂಬ ಗಾದೆಯನ್ನು ತಾವು ಕೇಳೋಣವಾಗಿದೆಯಷ್ಟೇ? ಆರನ್ನಾದರೂ ನಂಬಬಹುದು; ಗುರುತುಕಂಡ ಕಳ್ಳನನ್ನು ಮಟ್ಟಿಗೆ ನಂಬಲಿಕ್ಕಾಗದು, ಎಂದು ನುಡಿಯನ್ನು ನುಡಿದು ಸುಮ್ಮನಾದನು.

---

## ೬

## (ಸೋಮಸುಂದರನ ಹೇಳಿಕೆ)

ನಾವು ನಾಲ್ಕು ಜನರೂ ಮನೆಯನ್ನು ಸುತ್ತಿಕೊಂಡು ಬಂದೆವು. ಜಯಶಂಕರನು ನನ್ನನ್ನು ನೋಡಿ—ತಮ್ಮ ಶರೀರದಲ್ಲಿ ಈಗ ಶಕ್ತಿ ಸಂಚಾರವು ಹೇಗಿರುವುದು? ಎಂದು ಪ್ರಶ್ನೆಮಾಡಿದನು.

ನಾನು—ತಮ್ಮ ದರ್ಶನವಾದಂದಿನಿಂದ ಈಚೆಗೆ ನನಗೆ ಆರೋಗ್ಯವೆಂದೇ ಹೇಳಬೇಕು. ದಿನದಿನಕ್ಕೆ ಮನದಲ್ಲಿ ಭಯವು ತೊಲಗಿ ಉಲ್ಲಾಸವು ಕಾಣಬರುತ್ತಿರುವುದು. ಇನ್ನು ನನಗೆ ಪೂರ್ವಾವಸ್ಥೆ ಬಂದಿತೆಂದೇ ಹೇಳಬೇಕು.

ಜಯ—ಬಲು ಸಂತೋಷ. ನೀವು ಆರೋಗ್ಯದಿಂದಿರಬೇಕೆಂಬುದೇ ನನ್ನ ಆಶಯವು. ನಿನ್ನೆಯ ರಾತ್ರಿಯಲ್ಲಿ ನಡೆದ ಅಲ್ಪ ವಿಷಯಕ್ಕಾಗಿ, ನಾವು ನಮ್ಮ ಅಮೂಲ್ಯವಾದ ಕಾಲವನ್ನು ಈಗ ವ್ಯರ್ಥಮಾಡುವುದು ಯುಕ್ತವಾಗಿ ಕಾಣುವುದಿಲ್ಲ. ನಿಶಾಕಾಂತರಾಯರು ಕಳ್ಳನ ವಿಷಯವಾಗಿ ಗ್ರಾಮಾಧಿಕಾರಿಗಳಿಗಾದರೂ ತಿಳಿಸಲಿ, ಇಲ್ಲವೇ ಕಳ್ಳರನ್ನು ಹಿಡಿಯುವುದಕ್ಕೆ ಅವರಿಗೆ ತೋರಿಬರುವ ಉಪಾಯವನ್ನಾದರೂ ಮಾಡಲಿ. ಆ ವಿಚಾರವು ನಮಗೆ ಅಷ್ಟಾಗಿ ಬೇಕಿಲ್ಲ.

ಸೋಮ ಮಹಾಶಯ ! ನಮ್ಮ ಸ್ಥಲಕ್ಕೆ ತಮ್ಮನ್ನು ಕರೆದುಕೊಂಡು ಹೋಗಬೇಕೆಂದು ನಾನು ಬಯಸಿ ಬಂದಿರುವೆನು. ಬಲು ಬೆಲೆಯುಳ್ಳ ಆವ ಪತ್ರಗಳು ಕಳುವಾದುವೋ, ಆವುದನ್ನು ನಿಮಿತ್ತ ಮಾಡಿಕೊಂಡು ನಿಮಗೆ ಬುದ್ಧಿಭ್ರಮಣೆಯುಂಟಾಯಿತೋ, ಆವುದಕ್ಕೋಸ್ಕರ ತಾವು ನನ್ನನ್ನು ಇಲ್ಲಿಗೆ ಬರಮಾಡಿದರೋ, ಅವುಗಳ ವಿಷಯವಾಗಿ ಇಂದಿನ ವರೆಗೂ ನಾವೇನೂ ಕೆಲಸಮಾಡಿದಂತೆ ಕಂಡುಬರುವುದಿಲ್ಲ. ಈಗಳೇ ತುಂಬಾ ದಿನಗಳು ಕಳೆದುಹೋಗಿರುವುವು. ನಾವು ಇಲ್ಲಿಯೇ ಕಾಲಹರಣ ಮಾಡಿಕೊಂಡಿರುವುದಾದರೆ, ನಮ್ಮ ಕೆಲಸವೆಲ್ಲವೂ ಹಾಳಾಗಿ ಹೋಗುವ ಸಂಭವವುಂಟು. ಆದುದರಿಂದ ನಾವು ನಿಮ್ಮನ್ನು ನಮ್ಮ ಸ್ಥಲಕ್ಕೆ ಒಂದು ಸಲ ಮಟ್ಟಿಗೆ ಬಂದು ಹೋಗಬೇಕೆಂದು ಪ್ರಾರ್ಥಿಸುವೆವು. ಇದಲ್ಲದೇ ಇನ್ನೂ ಕೆಲವು ಸಂಗತಿಗಳನ್ನು ನಾವು ನಿಮ್ಮೊಡನೆ ಮಾತನಾಡಬೇಕಾಗಿರುವುದು. ಆದುದರಿಂದ ತಾವು ನಮ್ಮೊಡನೆ ಬರುವುದಕ್ಕೆ ಅಡ್ಡಿಯೇನೂ ಇಲ್ಲವಷ್ಟೇ ?

ನಿಶಾ—ತಾವು ಆ ಸಂಗತಿಗಳನ್ನು ಇಲ್ಲಿಯೇ ತಿಳಿಸುವುದರಲ್ಲಿ ತೊಂದರೆಯೇನಿರುವುದು ?

ಜಯ—ಈಗ ಆಗಲಾರದು. ನಾಳೆಯೋ, ನಾಡದೋ, ಆಚೆನಾಡದೋ ಸಂಗತಿಯೆಲ್ಲವೂ ಗೊತ್ತಾಗಿಯೇ ಆಗುವುದು. ಕಳ್ಳನನ್ನು ಪದಾರ್ಥದೊಡನೆ ಹಿಡಿದು ಇದಿರಿನಲ್ಲಿ ನಿಲ್ಲಿಸಿದರೆ ಸಂಗತಿಯು ಗೊತ್ತಾಗುವುದಿಲ್ಲವೇ ? ಅದಕ್ಕಾಗಿ ಈಗಳಿಂದ ತವಕ ಪಟ್ಟು ಪ್ರಯೋಜನವೇನು ?

ನಿಶಾ—ತಾವು ಆರ ಮೇಲೋ ಸಂಶಯಪಟ್ಟಂತೆ, ತಮ್ಮ ಮಾತಿನಿಂದ ತೋರಿಬರುತ್ತಿರುವುದು.

ಜಯ—'ಕಳವು ಒಂದು ಕಡೆಯಾದರೆ, ಸಂದೇಹವು ನಾನಾ ಕಡೆ' ಎಂಬುದು ಎಲ್ಲರಿಗೂ ಗೊತ್ತೇ ಇರುವುದು. ತಕ್ಕ ಪ್ರಮಾಣಗಳು ಸಿಕ್ಕದೆಯೇ, ಇಂಥವನೇ ಕಳ್ಳನೆಂದು ಹೇಳುವುದು ಹೇಗೆ ಸಾಧ್ಯ? ಈಗ ನಾವು ಸೋಮಸುಂದರನನ್ನು ಬೇರೆಬೇರೆಯ ಕಡೆಗಳಿಗೆ ಕರೆದುಕೊಂಡು ಹೋಗಿ ಪ್ರಮಾಣಗಳನ್ನು ಸಂಗ್ರಹಿಸಬೇಕೆಂದಿರುವೆವು. ನಾವು ಆವ ಉದ್ದೇಶದಿಂದ ಎಲ್ಲಿಗೆ ಹೋಗುವೆವೋ, ಏನ ಮಾಡುವೆವೋ, ಅದನ್ನು ಕುರಿತು ಈಗ ಹೇಗೆ ಹೇಳುವುದಕ್ಕೆ ಆದೀತು ? ನಮ್ಮ ಕಾರ್ಯವು ಸಿದ್ಧಿಯಾದೊಡನೆ ಹಿಂದಿರುಗಿ ಬರುವೆವು. ನಾನು ಬರಲಿ, ಬಾರದಿರಲಿ, ಸೋಮಸುಂದರರಂತೂ ಹಿಂದಿರುಗಿ ಬಂದೇ ಬರುವರು. ಬಳಿಕ ತಮಗೆ ಎಲ್ಲಾ ಸಂಗತಿಗಳೂ ತಿಳಿಸಲ್ಪಡುವುವು.

ನಿಶಾಕಾಂತನು ಜಯಶಂಕರನ ಮಾತಿಗೆ ಒಪ್ಪಿಕೊಂಡು, ನಮ್ಮ ಭೋಜನಾದಿಗಳಿಗೆ ತಕ್ಕ ಏರ್ಪಾಡನ್ನು ಮಾಡಿ, ತಾನು ಎಲ್ಲಿಯೋ ಹೊರಟು ಹೋದನು.

ಕಾಲಕ್ಕೆ ಸರಿಯಾಗಿ ನಾವುಗಳು ಭೋಜನಾದಿಗಳನ್ನು ತೀರಿಸಿಕೊಂಡೆವು. ನಾನು ಆವ ಕೋಣೆಯಲ್ಲಿ ಇಷ್ಟು ದಿನಗಳೂ ರೋಗದಿಂದ ಪೀಡಿತನಾಗಿ ಹಾಸುಗೆ ಹಿಡಿದು ಬಿದ್ದಿದ್ದೆನೋ, ಅದು ನಿಶಾಕಾಂತನಿಗೆ ಸೇರಿದುದಾಗಿದ್ದಿತು. ಒಳಗಿನ ಮನೆಗೂ ಅದಕ್ಕೂ ಸಂಬಂಧವಿರಲಿಲ್ಲ. ಸರ್ವಮಂಗಳೆಯು ಆ ಕೋಣೆಗೆ ನಿತ್ಯವೂ ನನ್ನ ಶಿಶ್ರೂಷೆಗಾಗಿ ಬಂದು ಹೋಗುತ್ತಿದ್ದಳು. ಆವ ದಿನ ನನಗೆ ನಿದ್ದೆ ಹತ್ತುವುದಕ್ಕೆ ಪ್ರಾರಂಭವಾದುದೋ, ಅಂದು ಮೊದಲು, ಆಕೆಯು ನಾನಿದ್ದಲ್ಲಿಗೆ ಬರುವುದನ್ನು ಕಡಮೆಮಾಡಿಬಿಟ್ಟಳು.

ನಾವು ಊಟವಾದ ಮೇಲೆ ಹೊರಡುವುದಕ್ಕೆ ಸಿದ್ಧರಾದಾಗ, ಜಯಶಂಕರನು ನನ್ನನ್ನು ನೋಡಿ—ಈ ಕೋಣೆಗೆ ಬೀಗವನ್ನು ಹಾಕಿಕೊಂಡು ನನ್ನ ಜತೆಯಲ್ಲಿ ಬರಬೇಕು, ಎಂದನು.

ನಾನು ಅದರಂತೆಯೇ ಮಾಡಿದೆನು. ಬಳಿಕ, ನಾವು ಮೂವರು—ಎಂದರೆ, ನಾನು, ಲಲಿತಮೋಹನ, ಜಯಶಂಕರ, ಇವರು ಮೆಟ್ಟಿಗೆ ಮನೆಯಿಂದ ಹೊರಗೆ ಕಾಲಿಟ್ಟೆವು. ಬಾಗಿಲಿನಲ್ಲಿ ಸೇವಕನೊಬ್ಬನು ಕುಳಿತಿದ್ದನು. ಅವನನ್ನು ನೋಡಿ ಜಯಶಂಕರನು—ಎಲಾ! ನಾವು ಹೊರಡುವ ಹೊತ್ತಿಗೆ ಸರಿಯಾಗಿ ಯಜಮಾನನು ಮನೆಯಲ್ಲಿಲ್ಲ. ಮೊದಲೇ ಅವರಿಗೊಂದು ಸಂಗತಿಯನ್ನು ತಿಳಿಸಬೇಕಾಗಿದ್ದಿತು. ಆಗ ನಾವು ಮರೆತೆವು. ಈ ರಾತ್ರಿಯಲ್ಲಿ ಹತ್ತು ಗಂಟೆಯ ಹೊತ್ತಿಗೆ ನಾವು ಹಿಂದಿರುಗಿ ಬರುವೆವು. ಆ ಹೊತ್ತು ಮೀರುವುದಾದರೆ, ನಾವು ಈ ರಾತ್ರಿ ಬಾರದೆ ನಾಳೆಯ ಬೆಳಗ್ಗೆ ಬಂದೇ ಬರುವೆವು. ಇದನ್ನು ನೀನು ಖಂಡಿತವಾಗಿಯೂ ನಾನು ಹೇಳಿದೆನೆಂದು ಯಜಮಾನನಿಗೆ ತಿಳಿಸು, ಮರೆಯ ಬೇಡ, ಕಂಡೆಯಾ? ಎಂದನು.

'ಅಪ್ಪಣೆ' ಎಂದು ಸೇವಕನು ಮನೆಯೊಳಗೆ ಹೊರಟು ಹೋದನು. ನಾವು ಮೂವರೂ ಬಂಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು ಅಲ್ಲಿಂದ ಮುಂದಕ್ಕೆ ತೆರಳಿದೆವು. ನಾವೆಲ್ಲರೂ ಬಂಡಿಯಲ್ಲಿ ಕುಳಿತುಕೊಂಡು ಕೊಂಚ ದೂರ ಹೋದ ಮೇಲೆ, ಜಯಶಂಕರನು ಹಠಾತ್ತಾಗಿ ನನ್ನನ್ನು ಕುರಿತು ಇಂತೆಂದನು :—

"ಮಹಾಶಯ! ಅದೊಂದು ಅಚಾತುರ್ಯವು ನಡೆದುಹೋಗಿರುವುದು. ಈಗ ವ್ಯಸನಪಟ್ಟು ಪ್ರಯೋಜನವಿಲ್ಲ. ದಿನದಿನಕ್ಕೆ ನನ್ನ ಬುದ್ಧಿಯಲ್ಲಿ ಮರೆವು ತಲೆದೋರುತ್ತಿರುವುದು. ಪತ್ತೇದಾರರಿಗೆ ಮರೆವು ಬಂದ ಮೇಲೆ ಹೇಳಲೇ ಕೆಲಸವಿಲ್ಲ. ಕೈ ಮೀರಿದ ಕಾರ್ಯಕ್ಕೆ ವ್ಯಸನಪಟ್ಟೇನು ಪ್ರಯೋಜನ? ನಾನೀಗ ಎಲ್ಲಿಗೂ ಹೊರಡುವುದಕ್ಕಾಗುವುದಿಲ್ಲ. ನೀವು ಲಲಿತಮೋಹನನೊಡನೆ ತೆರಳೋಣ

ವಾಗಲಿ. ನಾನು ಬಂದು ನಿಮ್ಮನ್ನು ನೋಡುವ ವರೆಗೂ, ನೀವು ಮತ್ತೆ ಲ್ಲಿಗೂ ಹೋಗಕೂಡದು. ಹಾಗೆ ಹೋಗುವುದಾದರೆ, ನಮ್ಮಗಳ ಪ್ರಾಣವೇ ಹಾರಿ ಹೋಗುವುದು. ನೀವು ಮಟ್ಟಿಗೆ ಎಚ್ಚರಿಕೆಯಿಂದ ಇರಬೇಕು. ನಾನು ಒಂದು ಪದಾರ್ಥವನ್ನು ಕೋಣೆಯಲ್ಲಿಯೇ ಮರೆತು ಬಂದಿರುವೆನು. ಬೀಗದ ಕೈಯನ್ನು ಕೊಡೋಣವಾಗಲಿ. ನಾನೊಬ್ಬನು ಮಟ್ಟಿಗೆ ಮನೆಗೆ ಹೋಗಿ ನನ್ನ ಪದಾರ್ಥವನ್ನು ತೆಗೆದುಕೊಂಡು ಬಂದು ನಿಮ್ಮನ್ನು ನೋಡುವೆನು. ”

ಹೀಗೆ ಹೇಳಿ ಜಯಶಂಕರನು ಬಂಡಿಯಿಂದಿಳಿದನು. ಬಂಡಿಯು ಮುಂದಕ್ಕೆ ತೆರಳಿತು.

---

೭

(ಲಲಿತಮೋಹನನ ಹೇಳಿಕೆ)

ಮರು ದಿನ ಪ್ರಾತಃಕಾಲ ಪ್ರಾಯಿಕವಾಗಿ ಒಂಬತ್ತು ಗಂಟೆಗೆ ಐದಾರು ನಿಮಿಷಗಳಿರುವಾಗಲೇ ಜಯಶಂಕರನು ಸೋಮಸುಂದರನ ಬಳಿಗೆ ಬಂದು ಸೇರಿದನು. ಅವನ ಬಟ್ಟೆಯೆಲ್ಲವೂ ರಕ್ತಮಯವಾಗಿದ್ದಿತು. ರಕ್ತದಲ್ಲಿಯೇ ತೋಯಿಸಲ್ಪಟ್ಟಂತಿದ್ದ ಚೌಕದ ಗಂಟೊಂದು ಆತನ ಕೈಯಲ್ಲಿದ್ದಿತು. ಇದನ್ನು ನೋಡಿದೊಡನೆಯೇ ನಮ್ಮಿಬ್ಬರಿಗೂ ಎದೆಯೊಡೆದು ಹೋಯಿತು. ಜಯಶಂಕರನು ನಮ್ಮನ್ನು ನೋಡಿ ನಗುತ್ತಾ ಇಂತೆಂದನು :—“ನಮ್ಮ ಕೆಲಸವೇ ಹೀಗೆ. ನಮ್ಮಲ್ಲಿ ಜೀವನ ಮರಣಗಳಿಗೆ ನಿತ್ಯವೂ ಜಗಳವಿದ್ದೇ ಇರುವುದು. ನಮಗೆ ಬದುಕುವುದು ಹೇಗೋ, ಸಾಯುವುದೂ ಹಾಗೆಯೇ. ಅದರ ವಿಚಾರವದಂತಿರಲಿ. ಇಗೋ, ಈ ಗಂಟನ್ನು ತೆಗೆದುಕೊಂಡು ಬಿಚ್ಚಿ ನೋಡಿರಿ. ಇದರಲ್ಲಿ ಆವಾವುದೋ ಪತ್ರಗಳು ಇರುವಂತೆ ತೋರಿಬರುತ್ತಿರುವುದು. ನೀವು ಕಳೆದುಕೊಂಡುದು ಇದರಲ್ಲಿದೆಯೋ ಇಲ್ಲವೋ ಎಂಬುದನ್ನು ನಿಶ್ಚಯಮಾಡಿಕೊಳ್ಳಿರಿ. ”

ಸೋಮಸುಂದರನು ಗಂಟನ್ನು ಬಿಚ್ಚಿನೋಡಿ, ಕಳೆದುಹೋಗಿದ್ದ ತನ್ನ ಗೋಪ್ಯದ ಪತ್ರಗಳು ಮತ್ತೆ ಕೈಗೆ ಸಿಕ್ಕಿದುದನ್ನು ಕಂಡು ಪರಮಾನಂದ ಭರಿತನಾಗಿ ಹುಚ್ಚನಂತೆ ಮನೆಯಲ್ಲೆಲ್ಲಾ ಕುಣಿದಾಡಿಬಿಟ್ಟನು. ಅತಿಯಾದ ಸಂತೋಷದಿಂದ, ಅವನಿಗೆ ಆ ಕೂಡಲೆ ಮೂರ್ಛೆಯುಂಟಾಯಿತು. ಜಯಶಂಕರನು ಶೈತ್ಯೋಪಚಾರದಿಂದ ಸೋಮಸುಂದರನನ್ನು ಸಂತೈಸಿ—ಮಹಾಶಯ ! ಇದು ಸಂತೋಷದ ಸುದ್ದಿಯೇ ಸರಿ. ಏತಕೆಂದರೆ :—ಇದನ್ನು ಕದ್ದ ಕಳ್ಳನೇ ಆಗಲಿ, ಮತ್ತಾವನೇ ಆಗಲಿ, ಈ ಗಂಟನ್ನು ಬಿಚ್ಚಿ ನೋಡಿಯೇ ಇಲ್ಲ, ಎಂದು ನುಡಿದನು.

ಸೋಮಸುಂದರನು ಅತ್ಯಾದರದಿಂದ—ಕಳ್ಳನಾರು ? ಆರಿದನ್ನು ಕದ್ದವರು ? ಎಂದು ಕೇಳಿದನು.

ಜಯ--ತಾವು ಇಷ್ಟು ಆತುರರಾಗಬೇಕಾದುದೇನೂ ಇಲ್ಲ. ಕೊಂಚ ಮಟ್ಟಿಗೆ ಶಾಂತರಾಗಿರಿ. ತನುಗೆ ಎಲ್ಲವನ್ನೂ ತಿಳಿಸದೇ ಮತ್ತಾರಿಗೆ ತಿಳಿಸಲಿ ?

ಸೋಮ—ತಿಳಿಸಿ ತಿಳಿಸಿ, ಬೇಗನೆ ತಿಳಿಸಿ ; ನನಗೆ ತಡೆಯುವುದಕ್ಕೆ ಸಹನೆಯೇ ಇಲ್ಲ. ಕಳ್ಳರಾರೆಂಬುದನ್ನು ನನಗೆ ಮೊದಲು ತಿಳಿಸಿರಿ. ನಿಮ್ಮ ದಯೆಯಿಂದ ನನ್ನ ಮಾನಮರ್ಯಾದೆಗಳೆಲ್ಲವೂ ಕಾಪಿಡಲ್ಪಟ್ಟುವು. ನನಗೆ ವಿನಾಶವನ್ನುಂಟುಮಾಡಬೇಕೆಂದಿದ್ದವರು ಆರೆಂಬುದು ಗೊತ್ತಾದರೆ, ಆಗ ನನ್ನ ಮನಸ್ಸಿಗೆ ಸಂಪೂರ್ಣವಾದ ಶಾಂತಿಯುಂಟಾಗುವುದು. ನಾನು ಬಲು ಮಾತನಾಡಿ ಪ್ರಯೋಜನವೇನು ? ತಾವೇ ನನಗೆ ಪ್ರಾಣದಾನ ಮಾಡಿದ ತಂದೆಯು.

ಜಯ—ನಿಮ್ಮ ಪ್ರಾಣವನ್ನು ಉಳಿಸುವುದಕ್ಕೆ ಯತ್ನಮಾಡಿ, ನಾನು ನನ್ನ ಪ್ರಾಣವನ್ನೇ ಕಳೆದುಕೊಳ್ಳುತ್ತಿದ್ದೆನು. ಮಾತ ಕೊಟ್ಟು ಒಪ್ಪಿಕೊಂಡ ಮೇಲೆ, ಕೆಲಸಮಾಡದಿರಲು ನನ್ನಿಂದಾಗಲಾರದು. ಅಂತಹ ಸಂದರ್ಭದಲ್ಲಿ ಪ್ರಾಣಹೋದರೂ, ನಾನು ಲೆಕ್ಕಿಸತಕ್ಕವನಲ್ಲ. ನಾನು ಅಪಯಶಸ್ಸಿಗೆ ಬಹಳ ವಾಗಿ ಹೆದರುವೆನು.

ಸೋಮ—ತಮ್ಮಲ್ಲಿ ಈ ಗುಣವಿದ್ದುದರಿಂದಲೇ, ನಮ್ಮ ಭರತಖಂಡದ ಆಬಾಲವೃದ್ಧರೆಲ್ಲರೂ ನಿಮ್ಮನ್ನು ಹೊಗಳುತ್ತಿರುವರು. ಕಳ್ಳರು, ದರೋಡೆ ಗಳ್ಳರು, ಕೊಲೆಗಾರರು, ಮೋಸಗಾರರು, ಜೂಜಾಟದವರು ಇವರೇ ಆದಿಯಾದ ಲೋಕಕಂಟಕರು ನಿಮ್ಮ ಹೆಸರನ್ನು ಕೇಳಿದ ಕೂಡಲೆ ಎಲ್ಲಿದ್ದವರು ಅಲ್ಲಿಯೇ ಅಡಗಿ ಹೋಗುವರು. ಇದಂತಿರಲಿ. ತಾವು ಕಾರ್ಯವನ್ನು ಸಾಧಿಸಿದ ಬಗೆಯನ್ನು ದಯೆಯಿಟ್ಟು ನನಗೆ ತಿಳಿಸಬೇಕು. ನಿಮಗೆ ನಾನು ಎಷ್ಟೋ ಕೃತಜ್ಞನಾಗಿರುವೆನು.

ಜಯಶಂಕರನು ಸೋಮಸುಂದರನ ದೈನ್ಯವನ್ನು ನೋಡಿ ಮನಗರಗಿದವ ನಾಗಿ ತಾನು ನಡೆಯಿಸಿದ ಸಂಗತಿಯನ್ನು ತಿಳಿಸಿದನು. ಅದು ಈ ರೀತಿಯಾ ಗಿದ್ದಿತು :—

"ನಾನು ನಿಮ್ಮಿಂದ ಅಪ್ಪಣೆಯನ್ನು ತೆಗೆದುಕೊಂಡು ಹೊರಟು ಹೋಗಿ ರಾತ್ರಿಯಾಗುವುದನ್ನೇ ನಿರೀಕ್ಷಿಸುತ್ತಾ ಅಲ್ಲಲ್ಲಿ ಕಾಲವನ್ನು ಕಳೆಯುತ್ತಿದ್ದೆನು. ರಾತ್ರಿಯಾಯಿತು ; ಅಂಧಕಾರವು ಎಲ್ಲೆಲ್ಲಿಯೂ ಆವರಿಸಿಕೊಂಡು ಬಂದಿತು. ನಾನು ಆ ಸುಯೋಗವನ್ನು ಅವಲಂಬಿಸಿಕೊಂಡು ಸೀತಾಕಾಂತರಾಯನ ಮನೆಯ ಹಿಂಗಡೆಗೆ

ಹೋಗಿ, ಆವ ಕಡೆಯಿಂದ ಕಳ್ಳನು ಕಷ್ಟವಿಲ್ಲದೆ ಮನೆಯೊಳಗೆ ಪ್ರವೇಶಮಾಡ ಬಹುದೆಂದು ಮೊದಲೇ ಸಿದ್ಧಾಂತವಾಗಿದ್ದಿತೋ, ಅದೇ ಕಡೆಯಿಂದ ನಾನೂ ಕಳ್ಳ ನಂತೆಯೇ ಗೋಡೆಯನ್ನು ಹಾರಿ ಮನೆಯ ಹಿತ್ತಲಿಗೆ ಹೋದೆನು.

ಸೋಮ—ನನ್ನಿಂದ ಬೀಗದ ಕೈಯನ್ನು ತೆಗೆದುಕೊಂಡು ಹೋದಿ ರಲ್ಲವೇ? ಮನೆಯ ಮುಂಗಡೆಯಿಂದಲೇ ಹೋಗಬಹುದಾಗಿತ್ತಲ್ಲ, ಭಯವೇನು?

ಜಯ—ಮನೆಯ ಮುಂಗಡೆಯಿಂದ ಹೋಗದಿರಲು ನನಗೊಂದು ಕಾರಣ ವಿದ್ದಿತು. ನಾನು ಹಿತ್ತಲಲ್ಲಿ ಪ್ರವೇಶಮಾಡಿ ಅಲ್ಲಿದ್ದ ಗಿಡುಗಳ ಹಿಂಗಡೆ ಆರಿಗೂ ಕಾಣದ ಹಾಗೆ ನಿಂತುಕೊಂಡು ಹಿಂದೆ ಬಂದಿದ್ದ ಕಳ್ಳನೇನಾದರೂ ಮತ್ತೆ ಬರು ವನೋ ಏನೋ ಎಂದು ನೋಡುತ್ತಾ ಕಾದಿದ್ದೆನು. ಆ ಸಮಯಕ್ಕೆ ಸರಿಯಾಗಿ ರಾತ್ರಿಯಲ್ಲಿ ಹನ್ನೆರಡು ಗಂಟೆ ಹೊಡೆಯಿತು. ಆಗ ನಾನು ಎಚ್ಚರಿಕೆಯಿಂದ ಸುತ್ತಲೂ ನೋಡಿದೆನು. ನಾನು ನೋಡುತ್ತಿದ್ದ ಹಾಗೆಯೇ ಆವನೋ ಒಬ್ಬನು ತಲೆಯಿಂದ ಕಾಲಿನ ವರೆಗೂ ಕರಿಯ ಕಂಬಳಿಯನ್ನು ಹೊದೆದುಕೊಂಡು ಸದ್ದಿಲ್ಲದ ಹಾಗೆ ನಿಮ್ಮ ಕೋಣೆಯ ಕಿಟಕಿಯ ಬಳಿಯಲ್ಲಿ ಬಂದು ನಿಂತನು. ಆತನು ಗೋಡೆ ಯನ್ನು ದುಮ್ಮಿಕ್ಕಿ ಒಳಗೆ ಬರಲಿಲ್ಲ. ಆತನ ಆಕಾರ ಪ್ರಕಾರಗಳನ್ನು ನೋಡಿದರೆ, ನಿಶಾಕಾಂತರಾಯನೇ ಇರಬಹುದೆಂದು ಕಾಣಬಂದಿತು.

ಸೋಮ—(ಅಚ್ಚರಿಯಿಂದ) ಏನು, ನಿಶಾಕಾಂತರಾಯನೇ! ಅದೆಂತಹ ಮಾತು?

ಜಯ—ಅವರೇ, ಸ್ವಾಮಿ, ಅವರೇ! ಖಂಡಿತವಾಗಿಯೂ ಅವರೇ! ನಿಮ್ಮ ಮುಂದಣ ಪ್ಯಾಲಕರೇ ಅವರು. ನಾನು ಕಣ್ಣಿನಲ್ಲಿ ಕಣ್ಣನಿಟ್ಟು ನೋಡಿ ದೆನು. ಅವರ ಕೈಯಲ್ಲಿ ಒಂದು ಮಚ್ಚಿದ್ದಿತು. ಆ ಮಚ್ಚಿನ ಸಾಹಾಯ್ಯದಿಂದ ಅವರು ಕಿಟಕಿಯ ಬಾಗಿಲನ್ನು ತೆರೆದು ಮೆಲ್ಲನೆ ಕೋಣೆಯೊಳಗೆ ಪ್ರವೇಶಮಾಡಿ ದರು. ನಾನು ಆ ಕೂಡಲೆ ಕಿಟಕಿಯ ಬಾಗಿಲ ಬಳಿ ಬಂದು ನಿಂತೆನು. ಕೋಣೆ ಯಲ್ಲಿ ಪ್ರವೇಶಮಾಡಿದ ನಿಶಾಕಾಂತನು ಏನ ಮಾಡುವನೆಂಬುದನ್ನು ನಾನು ರಪ್ಪೆ ಹಾಕದೆ ನೋಡಲಾರಂಭಿಸಿದೆನು. ಆತನು ಕೋಣೆಯಲ್ಲಿ ದೀಪವನ್ನು ಕಚ್ಚಿಸಿದನು. ಕೋಣೆಯೆಲ್ಲವೂ ಬೆಳಕಾಯಿತು. ಆ ಮೇಲೆ ಆ ಕೋಣೆಯಲ್ಲಿದ್ದ ಮಂಚದ ಕೆಳಗೆ ಬಗ್ಗಿ ಆತನು ತೆವಳಿಕೊಂಡು ಹೋದನು. ಆಗ ನಾನು ಬಲು ಎಚ್ಚರಿಕೆಯಿಂದ ನೋಡತೊಡಗಿದೆನು. ಒಂದು ಮೂಲೆಯಲ್ಲಿ ತನ್ನ ಕಯ್ಯಲ್ಲಿದ್ದ ಮಚ್ಚಿನಿಂದ ನೆಲವನ್ನು ಅಗೆದನು. ಅಗೆದಗೆದು ಹಳ್ಳದಲ್ಲಿದ್ದ ಒಂದು ಚೌಕದ

ಗಂಟನ್ನು ಹೊರಗೆ ತೆಗೆದು ಮತ್ತೆ ಆ ಹಳ್ಳವನ್ನು ಮುಚ್ಚಿ ತೆವಳಿಕೊಂಡು ಈಚೆಗೆ ಬಂದು ದೀಪವನ್ನು ಆರಿಸಿದನು.

ಆತನು ಹೊರಗೆ ಬರುವುದನ್ನೇ ನಾನು ಇದಿರು ನೋಡುತ್ತಿದ್ದ ಹಾಗೆಯೇ, ಆತನೂ ಹೊರಗೆ ಬಂದನು. ಬಂದ ಕೂಡಲೆ, ನಾನು ಆತನನ್ನು ಬಲವಾಗಿ ಹಿಡಿದುಕೊಂಡೆನು. ಆತನು ದಿಗಿಲು ಬಿದ್ದವನಾಗಿ ನನ್ನಿಂದ ತಪ್ಪಿಸಿಕೊಳ್ಳಲು ಯತ್ನಮಾಡಿದನು. ಮನುಷ್ಯನು ತನ್ನ ಪ್ರಾಣಕ್ಕೆ ಅಪಾಯವು ಸಂಭವಿಸತಕ್ಕ ಸಮಯಗಳಲ್ಲಿ ಆವ ವಿಧವಾಗಿಯಾದರೂ ಬದುಕಿಕೊಳ್ಳುವುದಕ್ಕೆ ಯತ್ನಮಾಡು ವಂತೆ, ನಿಶಾಕಾಂತನೂ ಆತ್ಮರಕ್ಷಣೆಗಾಗಿ ಬೇಕಾದ ಹಾಗೆ ಯತ್ನಮಾಡಿದನು. ಆತನು ತನ್ನ ಕೈಯಲ್ಲಿದ್ದ ಮುಚ್ಚಿನಿಂದ ನನ್ನನ್ನು ಪ್ರಹರಿಸಲು ಒಂದೆರಡು ಸಲ ಕೈಯೆತ್ತಿದನು. ಆ ಸಂಭ್ರಮದಲ್ಲಿ ನನಗೂ ಒಂದೆರಡು ಪೆಟ್ಟುಗಳು ಬಿದ್ದುವು. ಎಂದ ಮೇಲೆ, ನನ್ನ ಕೋಪವೂ ತಲೆಮೀರಿ ಹೋಯಿತು.

ವಿರಾಟನಗರದಲ್ಲಿ ಭೀಮಕೀಚಕರು ಪರಸ್ಪರವಾಗಿ ಜಯಾಪೇಕ್ಷೆಯಿಂದ ಹೇಗೆ ಕಾದಾಡಿದರೋ, ಅದೇ ರೀತಿಯಲ್ಲಿಯೇ ನಾವಿಬ್ಬರೂ ಹೋರಾಡಿದೆವು. ನಮ್ಮಿಬ್ಬರ ದ್ವಂದ್ವಯುದ್ಧವು ಪ್ರಾಯಿಕವಾಗಿ ಅರ್ಧಘಂಟೆಯ ವರೆಗೂ ನಡೆದಿರ ಬಹುದು. ಕೊನೆಗೆ ನಿಶಾಕಾಂತನು ನನ್ನ ಏಟನ್ನು ತಡೆಯಲಾರದೆ, ತಾನು ಸೋತೆನೆಂದು ಒಪ್ಪಿಕೊಳ್ಳಬೇಕಾಯಿತು. ಆದುದರಿಂದಲೇ ಆತನು ನನ್ನ ಕಾಲು ಗಳ ಮೇಲೆ ಬಿದ್ದು ತನ್ನ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ಆತನ ಕೈಯಲ್ಲಿದ್ದ ಗಂಟನ್ನು ನಾನು ಸುಲಭವಾಗಿ ಕಸಿದುಕೊಂಡೆನು. ಬಳಿಕ ಆತನು ಬಲುವಾಗಿ ಕೇಳಿಕೊಂಡುದರ ಮೇಲೆ, ನಾನು ಆತನನ್ನು ಬಿಟ್ಟುಬಿಟ್ಟೆನು.

ಸೋಮ—(ಆಶ್ಚರ್ಯದಿಂದ) ಬಿಟ್ಟು ಬಿಡೋಣವಾಯಿತೇ ! ಅಪರಾಧಿ ಯನ್ನು ಬಿಡುವುದು ಧರ್ಮವಲ್ಲ.

ಜಯ—ಆತನು ಯಾಮಿಕರ ಕೈಗೆ ಸಿಕ್ಕಿ ಸಲ್ಲದ ಸಂಕಟಕ್ಕೀಡಾಗಿ, ವೃತ್ತಾಂತ ಪತ್ರಿಕೆಗಳಲ್ಲಿ ಹೊಗಳಲ್ಪಟ್ಟು ಜನರ ಬಾಯಿಗೆ ಬಿದ್ದು ಒದ್ದಾಡ ಬೇಕೆಂದು ತಮಗೆ ಇಷ್ಟವಿದ್ದಂತೆ ತೋರುವುದು. ತಮ್ಮ ಕೆಲಸವಾಯಿತು ; ಆತನಿಗೂ ತಕ್ಕ ಶಿಕ್ಷೆಯಾಯಿತು. ಈಗ ಗಲಭೆಯೆಬ್ಬಿಸುವುದರಿಂದ ಪ್ರಯೋಜನ ವೇನು ? ಆತನು ಈಗೇನೂ ಓಡಿಹೋಗಿಲ್ಲ. ಆತನನ್ನು ಆವಾಗ ಬೇಕಾದರೂ ಹಿಡಿದು ದಂಡಿಸಬಹುದು.

ಸೋಮ—ಹಾಗೆಂದ ಮೇಲೆ, ಬೇಡ; ಬಿಟ್ಟು ಬಿಡಿ. ಗಲಭೆಯಾಗ ಬೇಕೆಂದು ಆರಿಗೆ ತಾನೇ ಇಷ್ಟ ? ಅದರ ಎಂತಹ ಸರ್ವನಾಶ ! ಹತ್ತು ವರ್ಷ

ಗಳಿಂದಲೂ ನಾನು ಪಡಬಾರದ ಕಷ್ಟಗಳನ್ನು ಅನುಭವಿಸಿದೆನು. ಅಲ್ಲದೆಯೂ ನಾನು ರೋಗದಿಂದ ಹಾಸುಗೆ ಹಿಡಿದು ಮಲಗಿದೆನು. ಕಳುವಾದ ವಸ್ತುವಾದರೋ ನನ್ನ ಹಾಸುಗೆಯ ಕೆಳಗೇ ಇದ್ದಿತು. ಇದೇನಾಶ್ಚರ್ಯ! ಇದಕ್ಕಾಗಿ ನಾನು ತಮಗೆ ಎಷ್ಟೋ ತೊಂದರೆಯನ್ನು ಕೊಡಬೇಕಾಯಿತು. ಆದರೂ ತಾವು ನನ್ನನ್ನು ಉದ್ಧಾರಮಾಡಿದುದಕ್ಕಾಗಿ, ನಾನು ನನ್ನ ಪ್ರಾಣವನ್ನೇ ತಮಗೆ ಸಮರ್ಪಣ ಮಾಡಿರುವೆನು.

ಜಯ—(ನಗುತ್ತಾ) ಆಶ್ಚರ್ಯದ ವಿಷಯವೇನೂ ಅಲ್ಲ. ಲೋಕದಲ್ಲ ಇಂತಹ ವಿಷಯಗಳು ಸಾಧಾರಣವಾಗಿ ನಡೆಯುತ್ತಲೇ ಇರುವುವು. ಪದಾರ್ಥ ಗಳನ್ನು ಹತ್ತಿರದಲ್ಲಿಯೇ ಇಟ್ಟುಕೊಂಡು ಎಲ್ಲೆಲ್ಲಿಯೋ ಹುಡುಕುವವರೂ ಉಂಟು.

ಸೋಮ—ಎಂತಹ ಭಯಂಕರವಾದ ವೃತ್ತಾಂತ! ನಿಶಾಕಾಂತನು ಇಷ್ಟು ನೀಚನೇ! ನಿಶಾಕಾಂತನು ಕಳ್ಳ, ಜಾರಿಗಳ್ಳ, ದರೋಡೆಗಳ್ಳ, ಗುರುತುಕಂಡ ಕಳ್ಳ! ಜನರ ಹೃದಯವನ್ನು ಬಲ್ಲವರಾರು?

ಜಯ—ತಮಗೆ ಆತನ ವಿಷಯವೇನು ಗೊತ್ತು! ಆತನ ಚರಿತ್ರೆಯಲ್ಲಿ ಒಂದಂಶವನ್ನು ನೋಡಿ ನೀವು ಇಷ್ಟು ಆಶ್ಚರ್ಯಪಡುವುದು ನೋಡಿದರೆ, ನನಗೆ ಪರಮಾಶ್ಚರ್ಯವಾಗುತ್ತಿರುವುದು. ನಾನು ಆತನ ವಿಷಯದಲ್ಲಿ ಇನ್ನೂ ಅನೇಕ ಸಂಗತಿಗಳನ್ನು ತಿಳಿದುಕೊಂಡಿರುವೆನು. ಆತನು ಆವಾಗಲೂ ಜೂಜಾಡತಕ್ಕವನು. ಅದಕ್ಕಾಗಿ ಆತನು ಸಾವಿರಾರು ರೂಪಾಯಿಗಳನ್ನೂ ಕಳೆದುಕೊಂಡಿರುವನು; ಇನ್ನೂ ಕಳೆದುಕೊಳ್ಳುತ್ತಿರುವನು. ಮನೆಮಟಗಳೆಲ್ಲವೂ ಇತರರಿಗೆ ಆಧಾರವಾಗಿ ಹೋ ಗಿರುವುದು. ಇದರ ಮೇಲೂ, ಹೆಂಡಿತಿಯ ಮೇಲಿರುವ ಒಡವೆಗಳೂ ದಿನಕ್ಕೊಂದ ರಂತೆ ಮಾಯವಾಗುತ್ತಿರುವುವು. ಆತನು ಎಲ್ಲರಿಗೂ ಸಾಲಗಾರನು. ಎಲ್ಲಿ ನೋಡಿ ದರೂ ಸಾಲಗಾರರು ಆತನನ್ನು ಬೀದಿಯಲ್ಲಿ ತಲೆಯಿಡದ ಹಾಗೆ ಮಾಡಿಬಿಟ್ಟಿರುವರು. ಈ ಬಾಧೆಯನ್ನು ತಡೆಯಲಾರದೆ ರಾಯನು ಸುಳ್ಳುತನ, ಕಳ್ಳತನ, ಮೋಸ, ಜೂಜು, ಸೂಳೆಬಾಕತನ ಮುಂತಾದ ದುಷ್ಕಾರ್ಯಗಳಲ್ಲಿ ಪ್ರವರ್ತಿಸಿರುವನು. ಭ್ರಷ್ಟನ ಬಾಳೆಲ್ಲಾ ಹೀಗೆಯೇ ಸರಿ.

ಸೋಮಸುಂದರನು ಜಯಶಂಕರನ ಮಾತನ್ನು ಕೇಳಿ ಕಣ್ಣುಗಳನ್ನು ಮುಚ್ಚಿಕೊಂಡು ಬಲು ಹೊತ್ತು ಏನೇನನ್ನೋ ಚಿಂತಿಸಿದ ಬಳಿಕ—ಮಹಾಶಯ! ನನ್ನ ತಲೆ ತಿರುಗುವುದು. ನನಗೆ ದಿಕ್ಕೇ ತೋರುವುದಿಲ್ಲ. ಎಲ್ಲಿ ನೋಡಿದರೂ ಅಂಧಕಾರವು ಕವಿದುಕೊಂಡು ಬರುತ್ತಿರುವುದು. ನನಗಾದರೋ ಈ ಹಾಳ ಸಂಸಾರದ ಮೇಲೆ ದ್ವೇಷವೇ ಹುಟ್ಟಿಹೋಗಿರುವುದು. ನನಗಿನ್ನು ಸಂಸಾರವೂ

ಬೇಡ, ಹಣದ ಸಂಪಾದನೆಯೂ ಬೇಡ, ಹೊಟ್ಟೆಗಾಗಿ ಪರಸೇವೆಯೂ ಬೇಡ. ಹಾ ದೈವವೇ! ಹಾ ಮಾತಃ ವಸುಂಧರೆ! ನಿನ್ನ ಅಗಾಧವಾದ ಹೃದಯದಲ್ಲಿ ನನ್ನನ್ನು ಧಾರಣಮಾಡಿಬಿಡು. ನಾನು ದುರಂತವಾದ ಈ ನರಕಯಾತನೆಯಿಂದ ಮುಕ್ತನಾಗುವೆನು.

---

## ೮

## (ಜಯಶಂಕರನ ಹೇಳಿಕೆ)

ಸೋಮಸುಂದರನಿಗೆ ಹೆಚ್ಚಾದ ವ್ಯಸನದಿಂದ ಬುದ್ಧಿಯಲ್ಲಿ ಭ್ರಮಣೆಯುಂಟಾಗಿರುವುದೆಂದು ತಿಳಿದು ಪನ್ನೀರನ್ನು ತರಿಸಿ, ಅದನ್ನು ಅವನ ತಲೆಗೆ ತಟ್ಟಿ ಕೊಂಚ ಹೊತ್ತು ವಿಶ್ರಮಿಸಿಕೊಳ್ಳುವಂತೆ ನಾನು ಅವನಿಗೆ ತಿಳಿಸಿದೆನು. ಆತನು ಒಂದೆರಡು ಗಂಟೆಗಳ ಕಾಲದ ವರೆಗೂ ವಿಶ್ರಾಂತಿಸುಖವನ್ನು ಹೊದ್ದಿದ ಬಳಿಕ ನನ್ನನ್ನು ಕುರಿತು—ಮಹಾಶಯ! ಈ ಗುಪ್ತವಾದ ಕಳ್ಳತನವನ್ನು ಭೇದಿಸಿದ ಬಗೆ ಹೇಗೆ? ಅದನ್ನು ನನಗೆ ಆದ್ಯೋಪಾಂತವಾಗಿ ತಿಳಿಯ ಹೇಳಬೇಕು, ಎಂದು ಅಂಗಲಾಚಿಕೊಂಡನು. ನಾನು ಬೇರೊಂದುಪಾಯವಿಲ್ಲದೆ, ಆತನ ಮಾತಿಗೆ ಒಪ್ಪಿಕೊಂಡು ನಡೆದ ಸಂಗತಿಯನ್ನು ಹಾಗೆಯೇ ಹೇಳಲಾರಂಭಿಸಿದೆನು :—

"ನಾನು ತಮ್ಮ ಕಾರ್ಯಭಾರವನ್ನು ವಹಿಸಿ ಬಲು ಕಷ್ಟಕ್ಕೆ ಗುರಿಯಾಗಬೇಕಾಗಿ ಬಂದು ಸೇರಿತು. ಅಪರಾಧವನ್ನು ಪತ್ತೆ ಮಾಡುವುದಕ್ಕೆ ಕೊಂಚವಾದರೂ ಸುಳುವಿರಬೇಕು. ಆಧಾರವೇ ಇಲ್ಲದೆ ಆವ ಕೆಲಸ ಮಾಡುವುದಕ್ಕೆ ತಾನೇ ಸಾಧ್ಯವಹುದು? ತಾವು ಮೊದಲು ಕೆಲವು ಮಾರ್ಗವನ್ನು ಸೂಚಿಸಿದಿರಿ. ಅದರಿಂದ ಬುದ್ಧಿಕ್ಲೇಶವೂ ದೇಹಶ್ರಮವೂ ಉಂಟಾಯಿತೇ ಹೊರತು, ಕಾರ್ಯಸಾಧನೆಯೇನೂ ಆಗಲಿಲ್ಲ. ಇಷ್ಟರಿಂದಲೇ ಎದೆಗೆಡುವುದು ಧೀರನಿಗೆ ಲಕ್ಷಣವಲ್ಲವಾದುದರಿಂದ, ನಾನು ನಾನಾ ಪ್ರಕಾರದಲ್ಲಿಯೂ ಬುದ್ಧಿಯನ್ನು ಓಡಿಸಿ ನೋಡಲಾರಂಭಿಸಿದೆನು.

'ಕಳವು ಒಂದು ಕಡೆಯಾದರೆ, ಸಂಶಯವು ಅನೇಕ ಕಡೆ' ಎಂಬ ಗಾದೆಗೆ ಸರಿಯಾಗಿ, ನಾನು ಸಂಶಯಕ್ಕೆ ಆಸ್ಪದವೇ ಇಲ್ಲದ ಸ್ಥಳಗಳಲ್ಲಿ ಸಂಶಯಪಡಬೇಕಾಗಿ ಬಂದು ಸೇರಿತು. ಆ ಸಂದರ್ಭದಲ್ಲಿ ನಾನು ನಿಶಾಕಾಂತರಾಯನ ಮೇಲೆಯೂ ಒಂದು ಕಣ್ಣನ್ನಿಟ್ಟೆನು. ಆವಾಗ ರಾಯನು ನಮ್ಮ ಗಮನಕ್ಕೆ ಬಿದ್ದನೋ, ಆಗ ಆತನ ಶೀಲಸ್ವಭಾವಗಳನ್ನು ತಿಳಿಯಬೇಕಾದ ಆವಶ್ಯಕತೆಯು ನನಗೆ ಹುಟ್ಟಿತು. ಅಂದಿನಿಂದಲೂ ರಾಯನನ್ನು ಪ್ರತಿಕ್ಷಣವೂ ಪರೀಕ್ಷಿಸಲಾರಂ

ಭಿಸಿದೆನು. ನಾನು ಈ ವಿಷಯವನ್ನೆತ್ತಿ ಮಾತನಾಡುತ್ತಿರುವಾಗಲೆಲ್ಲಾ, ಆತನ ಮುಖದಲ್ಲಿ ಅನಿರ್ವಚನೀಯವಾದದೊಂದು ಭಾವವು ಕಾಣಬರುತ್ತಿದ್ದಿತು. ಮೊದ ಮೊದಲು ಅದು ನನಗೆ ಅರ್ಥವಾಗಲಿಲ್ಲ. ನಾನು ಆವಾಗ ಸಂಶಯಪಡುವುದಕ್ಕೆ ಮೊದಲುಮಾಡಿದೆನೋ, ಅಂದು ಮೊದಲು ಆತನ ಪ್ರತಿಯೊಂದು ಭಾವಕ್ಕೂ ನನಗೆ ಅರ್ಥವಾಗಲಾರಂಭಿಸಿತು. ನಾನು ಈ ಸುಯೋಗವನ್ನೇ ಬಲವಾಗಿ ಹಿಡಿದುಕೊಂಡು ಇನ್ನೂ ಹೆಚ್ಚಾಗಿ ಪರೀಕ್ಷಿಸತೊಡಗಿದೆನು. ನನ್ನ ಊಹೆಗ ಳೆಲ್ಲವೂ ಸಫಲವಾಗುವಂತೆ ತೋರಿಬರುತ್ತಿದ್ದುವು.

ನಾನು ಸ್ಥೂಲದೃಷ್ಟಿಯಿಂದ ಇಷ್ಟರ ಮಟ್ಟಿಗೆ ಸ್ಥಿರಮಾಡಿಕೊಂಡು, ಸೂಕ್ಷ್ಮ ದೃಷ್ಟಿಯಿಂದ ಇದರ ಕಾರ್ಯಕಾರಣಗಳನ್ನು ಕಂಡು ಹಿಡಿಯಲು ಯತ್ನಿಸಿದೆನು. ಮೊದಲು ನಾನು ಸಿದ್ಧಾಂತಪಡಿಸಿಕೊಳ್ಳಬೇಕಾದ ಅಂಶಗಳು ಆವಾವುವೆಂದು ಪರ್ಯಾಲೋಚಿಸಿ, ಕಟ್ಟಕಡೆಗೆ ಇವೆರಡು ಅಂಶಗಳೇ ಕಾರ್ಯಸಾಧನೆಯಲ್ಲಿ ಸಾಧಕಗಳೆಂದು ತಿಳಿದುಕೊಂಡೆನು. ಅವುಗಳಲ್ಲಿ

ಒಂದನೆಯದು—ಕಳುವಾದ ರಾತ್ರಿಯಲ್ಲಿ ತಾವು ಮಹಡಿಯಿಂದ ಕೆಳಗಿಳಿದು ಬಂದಾಗ ಪ್ರಧಾನ ಸೇವಕನ ಹೆಂಡಿತಿಯು ಅಲ್ಲಿಲ್ಲದಿರಲು, ಆಕೆಯು ಮೇಲಕ್ಕೆ ಬಂದು ತಾವಿಲ್ಲದಿರುವುದನ್ನು ಕಂಡು ಆ ಗುಪ್ತಪತ್ರಗಳನ್ನು ಅಪಹರಿಸಿಕೊಂಡು ಓಡಿಹೋಗಿ ಕೊಂಚ ಲಾಭದ ಆಸೆಯಿಂದ ನಿಶಾಕಾಂತರಾಯನಿಗೆ ಕೊಟ್ಟಿದ್ದರೂ ಕೊಟ್ಟಿರಬಹುದು.

ಎರಡನೆಯದು—ಆವ ರಾತ್ರಿಯಲ್ಲಿ ನೀವು ಮನೆಗೆ ಹೋಗಿ ಏನೋ ಗುರುತರವಾದ ಕೆಲಸವಿದೆಯೆಂದು ಬೇಗಬೇಗನೆ ಊಟಮಾಡಿಕೊಂಡು ಕಾರ್ಯಸ್ಥಾನಕ್ಕೆ ಹಿಂದಿರುಗಿ ಬಂದರೋ, ಆಗಲೇ ನಿಶಾಕಾಂತರಾಯನೂ ಗಲ್ಲಿಯ ಕಡೆಯಿಂದ ಮನೆಯೊಳಗೆ ಪ್ರವೇಶಮಾಡಿ ದಪ್ತರದ ಕೋಣೆಗೆ ಬಂದು ಅಲ್ಲಿ ಕಾಲವನ್ನು ನಿರೀಕ್ಷಿಸಿಕೊಂಡಿದ್ದು, ತಾವು ಕೆಳಗಿಳಿದ ಮೇಲೆ, ಮೇಲೆಯೇ ಬಿದ್ದಿದ್ದ ಆ ಗುಪ್ತಪತ್ರಗಳನ್ನು ಅಪಹರಿಸಿಕೊಂಡು ಅಲ್ಲಿ ಬಿದ್ದು ಇಲ್ಲಿ ಬಿದ್ದು ಓಡಿ ಹೋಗಿರಬಹುದು.

ಈ ಕಳುವಿನಲ್ಲಿ ಇವೆರಡೇ ಮುಖ್ಯ ಕಾರಣಗಳು. ಇವೆರಡರಲ್ಲಿ ಮೊದಲನೆಯದನ್ನು ಕುರಿತು ಆಲೋಚಿಸಿ ನೋಡಿದೆನು. ಆಕೆಯ ಮೇಲೆ ತಪ್ಪನ್ನು ಹೊರಿಸುವುದಕ್ಕೆ ಅನೇಕ ಪ್ರತಿಬಂಧಕಗಳು ಕಂಡು ಬಂದುವು. ಅವುಗಳೆಲ್ಲವನ್ನೂ ಇಲ್ಲಿ ವರ್ಣಿಸಿ ಈ ಗ್ರಂಥವನ್ನು ದೊಡ್ಡದನ್ನಾಗಿ ಮಾಡಬೇಕೆಂಬ ಅಭಿಪ್ರಾಯವು ನನಗಿಲ್ಲ. ಎರಡನೆಯ ಅಂಶವನ್ನು ಕುರಿತು ನಾನು ಆಲೋಚಿಸಿದುದರಲ್ಲಿ, ನನಗೆ

ತಿಳಿದು ಬಂದ ಸಂಗತಿಗಳು ಈ ರೀತಿಯಾಗಿರುವುವು. ಕಳುವಾದ ದಿನ ಅವುದೋ ಹಬ್ಬವನ್ನು ನಿಮಿತ್ತ ಮಾಡಿಕೊಂಡು, ನಿಶಾಕಾಂತನು ನಿಮ್ಮನ್ನು ಊಟಕ್ಕೆ ಕರೆದಿದ್ದನು. ಹಗಲಿನಲ್ಲ ಹೋಗುವುದಕ್ಕೆ ಆಗದೇ ಇದ್ದುದರಿಂದ, ರಾತ್ರಿಯಲ್ಲಿ ಬರುವುದಾಗಿ ನೀವು ಒಪ್ಪಿದ್ದಿರಿ. ಆ ರಾತ್ರಿಯಲ್ಲಿಯೇ ನಿಮಗೆ ಹೆಚ್ಚಿನ ಕೆಲಸವು ಒದಗಿ ಬಂದುದರಿಂದ, ನೀವು ಬೇಗನೆಯೇ ಹೋಗಿ ಊಟಮಾಡಿಕೊಂಡು ಬರೋಣವೆಂದು ಬಂಡಿಯೊಂದನ್ನು ಮಾಡಿಕೊಂಡು ಹೋದುದು ಸರಿಯಷ್ಟೇ? ನೀವು ಮನೆಗೆ ಹೋಗಿ ಬೇಗ ಬೇಗನೆ ಊಟಮಾಡಿಕೊಂಡು ದಡಬಡನೆ ಹೊರಟು ಬಂದುದನ್ನು ರಾಯನು ನೋಡಿದನು. ಆತನು ತಮ್ಮ ಸ್ಥಿತಿಯನ್ನು ನೋಡಿ, ಏನೋ ಸ್ವಾರಸ್ಯವಿರಬೇಕೆಂದು ತಮ್ಮ ಹಿಂದೆ ಹಿಂದೆಯೇ ಕಾರ್ಯಸ್ಥಾನಕ್ಕೆ ಬಂದು ಸೇರಿದನು. ಅವನ್ನು ಆರೂ ನೋಡಲಿಲ್ಲ. ಆತನು ದಫ್ತರದ ಕೋಣೆಯಲ್ಲಿದ್ದುಕೊಂಡೇ, ನೀವು ಮಾಡುತ್ತಿದ್ದ ಕೆಲಸವೆಲ್ಲವನ್ನೂ ನೋಡಿದನು. ಆ ಪತ್ರವನ್ನು ತಾನು ನಿರಾಯಾಸವಾಗಿ ಕದ್ದು ಬಿಟ್ಟರೆ, ತನಗೇನಾದರೂ ಪ್ರಯೋಜನವಾಗಬಹುದೆಂದು ತಿಳಿದು, ಆತನು ಪ್ರತಿಕ್ಷಣವೂ ನೀವು ಕಣ್ಮರೆಯಾಗುವುದನ್ನೇ ಇದಿರುನೋಡುತ್ತಿದ್ದನು. ನೀವೂ ಕೆಳಗಿಳಿದಿರಿ; ಆತನೂ ಅದನ್ನು ಕದ್ದು ಮನೆಯ ಕಡೆಗೆ ಓಡಿದನು. ಕೊಂಚ ಹೊತ್ತಿನ ಮೇಲೆ, ನೀವು ಬುದ್ಧಿಭ್ರಮಣೆಯಿಂದ ಆತನ ಮನೆಗೇ ಹೋಗಿ ರಾಯನ ಕೋಣೆಯಲ್ಲಿಯೇ ಹಾಸುಗೆ ಹಿಡಿದು ಮಲಗಿದಿರಿ. ಪ್ರತಿನಿತ್ಯವೂ ಎಡೆಬಿಡದೆ ನಿಮಗೆ ಉಪಚಾರವು ನಡೆಯುತ್ತಿದ್ದ ಕಾರಣ, ಆ ಕೋಣೆಗೆ ಬಿಡುವೇ ಇರಲಿಲ್ಲ. ನಿಮ್ಮ ಕಣ್ಣಿಗೆ ನಿದ್ದೆ ಹತ್ತಿದ ದಿನ 'ಆರೋ ಕಳ್ಳರು ಕಿಟಕಿಯ ಬಾಗಿಲನ್ನು ತೆರೆಯುತ್ತಿದ್ದರು' ಎಂದು ನೀವು ಹೇಳಿದ ಮಾತನ್ನು ಕೇಳಿ ನನ್ನ ಸಂಶಯವು ಮತ್ತಷ್ಟು ಅಧಿಕವಾಗಿ, ಕಳುವಾದ ವಸ್ತುವು ತಾವು ಮಲಗಿದ್ದ ಕೋಣೆಯಲ್ಲಿಯೇ ಇರಬೇಕೆಂದು ನನಗೆ ಹೇಗೋ ಹೊಳೆಯಿತು. ಆದುದರಿಂದಲೇ ಆ ಸಂಗತಿಯನ್ನು ನಾನು ದೃಢವಾಗಿ ತಿಳಿದುಕೊಳ್ಳುವುದಕ್ಕೋಸ್ಕರ ನಿಮ್ಮನ್ನು ಮನೆಯಿಂದ ಹೊರಗೆ ಕರೆದುಕೊಂಡು ಬಂದುದು. ಆತನು ಆ ಪತ್ರವನ್ನು ಕದ್ದುಕೊಂಡು ಬಂದು ತಮ್ಮ ಕೋಣೆಯಲ್ಲಿಯೇ ಭದ್ರಪಡಿಸಿಟ್ಟು, ಮಾರನೆಯ ದಿನ ಅದನ್ನು ಬಿಚ್ಚಿ ನೋಡಿ ಅದರಲ್ಲಿ ಕಂಡಂತೆ ಕೆಲಸಮಾಡಬೇಕೆಂದು ಅವನಿಗೆ ಆಸೆಯಿದ್ದಿತು. ಹಣದ ಬಾಧೆಯು ಬಹಳವಾಗಿದ್ದುದರಿಂದ, ಅವನಿಗೆ ಒಂದು ದಿನವೂ ಒಂದು ಯುಗವಾಗಿ ತೋರಿ ಬರುತ್ತಿದ್ದಿತು.

ಈ ರೀತಿಯಲ್ಲಿ ಆತನು ಬೆಳಗಾಗುವುದನ್ನೇ ನೋಡುತ್ತಿದ್ದನು. ಅಷ್ಟರಲ್ಲಿಯೇ ನೀವು ಬಂದು ಅವರ ಕೋಣೆಯಲ್ಲಿಯೇ ಮಲಗಿದಿರಿ. ಅವರಿಗೆ ಸಂಕಟಕ್ಕಿಟ್ಟಿತು. ಆಗಲೂ ಕಾಣದ ಹಾಗೆ ಆ ಪತ್ರವನ್ನು ತೆಗೆದುಕೊಳ್ಳೋಣ

ವೆಂದರೆ, ಆ ಕೋಣೆಯಲ್ಲಿ ಆರಾದರೂ ಇದ್ದೇ ಇರುತ್ತಿದ್ದರು. ನಿಮಗೆ ಸುಖ ವಾಗಿ ನಿದ್ದೆ ಬಂದ ದಿವಸ ನಿಮ್ಮ ಕೋಣೆಯಲ್ಲಿ ಆರೂ ಇಲ್ಲದಿರುವುದನ್ನು ನೋಡಿ, ಮೊದಲೇ ಆ ಪತ್ರವನ್ನು ಅಲ್ಲಿಂದ ತೆಗೆದು ಬಿಡೋಣವೆಂದು ಆಲೋಚಿಸಿ ರಾತ್ರಿ ಯಲ್ಲಿ ಕಿಟಕಿಯ ಮೂಲಕವಾಗಿ ಒಳಗೆ ಬರಬೇಕೆಂದು ಎಣಿಸಿದನು. ಅಷ್ಟರಲ್ಲಿ ಯೇ ನಿಮಗೆ ಎಚ್ಚರಿಕೆಯಾಯಿತು. ಆದುದರಿಂದಲೇ ಆ ದಿನ ಆತನ ಕೆಲಸವು ನೆರವೇರಲಿಲ್ಲ. ನಾನು ಈ ಸಂದರ್ಭವನ್ನು ನೋಡಿ ನಿಮ್ಮನ್ನು ಮನೆಯಿಂದ ಹೊರಗೆ ಹೋಗುವಂತೆ ತಕ್ಕ ಏರ್ಪಾಡನ್ನು ಮಾಡಿ, ರಾತ್ರಿಯಲ್ಲಿ ಏನು ನಡೆಯು ವುದೆಂಬುದನ್ನು ತಿಳಿಯುವುದಕ್ಕಾಗಿ ಕಾದುಕೊಂಡಿದ್ದೆನು. ಆ ದಿನ ಆತನು ಬಂದೇ ಬರಬೇಕು; ಇಲ್ಲವಾದರೆ ಅವನ ಕಾರ್ಯವು ನೆರವೇರುವ ಹಾಗಿಲ್ಲ. ಮನೆಗೆ ಬೀಗವನ್ನು ಹಾಕದೆಯೇ ಹೋಗಿದ್ದಿದ್ದರೆ, ಕೆಲಸವೆಲ್ಲವೂ ಹಾಳಾಗಿ ಹೋಗುತ್ತಿ ದ್ದಿತು. ಮರುದಿನದ ರಾತ್ರಿಯಲ್ಲಿ ಆತನು ಬಂದೇ ಬಂದನು. ಮುಂದಣ ಕೆಲ ಸವೆಲ್ಲವೂ ಹೇಗೆ ನಡೆಯಬೇಕೋ ಹಾಗೆಯೇ ನಡೆದು ಹೋಯಿತು. ಅದೆಲ್ಲವೂ ತಮಗೆ ಗೊತ್ತೇ ಇದೆ. ”

ನಾನು ಹೀಗೆ ಹೇಳಿ ಆತನಿಂದ ಕಿತ್ತುಕೊಂಡಿದ್ದ ಮಚ್ಚನ್ನು ಸೋಮ ಸುಂದರನ ಕೈಗೆ ಕೊಟ್ಟೆನು.

ಸೋಮ—ಈ ಮಚ್ಚು ಏತಕೆ ? ನನ್ನನ್ನು ಕೊಲ್ಲುವುದಕ್ಕಿರಬಹುದು.

ನಾನು—ಆತನು ಆವ ಕೆಲಸ ಮಾಡುವುದಕ್ಕೂ ಹೇಸನು. ಆತನು ಕೇವಲವಾಗಿ ಸ್ವಾರ್ಥಪರನು.

## ಉಪಸಂಹಾರ

ಸೋಮ ಸುಂದರನು ಅವನ ಸೋದರ ಮಾಮನಾದ ಶ್ರೀರಮಾರಮಣ ಮಹಾಶಯನಿಗೆ ಕಳುವಾಗಿದ್ದ ಪತ್ರಗಳೆಲ್ಲವನ್ನೂ ಹಿಂದಿರುಗಿ ಕೊಟ್ಟನು. ಬಳಿಕ ಆತನಿಗುಂಟಾದ ಆನಂದಕ್ಕೆ ಪಾರವೇ ಇರಲಿಲ್ಲ. ರಮಾರಮಣನಿಗೆ ಸೋಮ ಸುಂದರನ ಮೇಲಿದ್ದ ಕೋಪವೆಲ್ಲವೂ ಶಾಂತವಾಯಿತು. ಇದರಿಂದ ಅವನಿಗೆ ಕಳೆದು ಹೋಗಿದ್ದ ಮಾನಮರ್ಯಾದೆಗಳೆಲ್ಲವೂ ಮತ್ತೆ ಬಂದುವು. ನನಗೆ ಶತಾ ಧಿಕವಾಗಿ ಪುರಸ್ಕಾರವೂ ದೊರೆಯಿತು. ಬಳಿಕ ನಾನು ರಮಾರಮಣನ ಹಾಗೂ ಸೋಮಸುಂದರನ ಅಪ್ಪಣೆಯನ್ನು ತೆಗೆದುಕೊಂಡು ಲಲಿತ ಮೋಹನನೊಡನೆ ನಮ್ಮ ಊರಿಗೆ ಹಿಂದಿರುಗಿ ಬಂದು ಬಿಟ್ಟೆನು.

ಶ್ರೀಕೃಷ್ಣಾರ್ಪಣಮಸ್ತು

**ಸಂಪೂರ್ಣಂ**